# ಪೋಲೀ ಕಿಟ್ಟೀ

(The story of a born scout)

ಕೈಲಾಸಂ

— ಪ್ರಕಾಶಕರು —

ಮಾಧವ ಸನ್ಸ್ – ಮದ್ರಾಸು – ಬೆಂಗಳೂರು

೧೯೪೩

ಮೊದಲ ಏಳು ದೃಶ್ಯಗಳು
ಬೆಂಗಳೂರು ದೇಶೀಯ ವಿದ್ಯಾಶಾಲಾ
ತ್ರೈಮಾಸ ಪತ್ರಿಕೆಯಲ್ಲಿ ಅಚ್ಚಾಗಿದ್ದುವು.

ಮೊದಲ ಪ್ರಕಟಣೆ
ಸ್ವಭಾನು ಸಂವತ್ಸರ ಮಾರ್ಗಶಿರ ಬಹುಳ ದ್ವಾದಶಿ
24—12—1943

—: ಮುದ್ರಣಕಾರರು:—
ಕರ್ಣಾಟಕ ಪಬ್ಲಿಷಿಂಗ್ ಹೌಸ್
ಕೋಟೆ, ಬೆಂಗಳೂರು



---



---

*For permission to stage apply to:*
*the Publishers with a Royalty of*
*Rupees Twenty only (Rs. 20/-)*
*for each performance*

## — ಪಾತ್ರಗಳು —

| | | |
|---|---|---|
| ಕಿಟ್ಟ | ..... | ಒಬ್ಬ 'ಪೋಲೀ' |
| ರಾಘು<br>ಶಾಮಿ<br>ಅಪ್ಪೂ<br>ವಾಸು<br>ಲಂಬು<br>ರಾಮು<br>ಮಗೂ | | ಸ್ಕೌಟು ದಳದವರು |
| ಕೃಷ್ಣಪ್ಪ | ...... | ಸ್ಕೌಟುಮಾಸ್ಟರ್ |
| ಮನೆಯಾತ<br>ಮನೆಯಾಕೆ | ...... | ಬೆಂಕಿಬಿದ್ದ ಮನೆಯವರು |

— Chief Scout —

Gentleman in attendance.

Police Inspector — Policemen.

Other Scouts — a Doctor — a cyclist, an old ryot, a woman with a child, Mother of ಮಗೂ, a child in cradle — ಇತರರು.

!! ಈ ರೂಪಕದಲ್ಲಿ ಬರುವ ವ್ಯಕ್ತಿಗಳಾಗಲಿ — ಸನ್ನಿವೇಶಗಳಾಗಲಿ ಯಾರನ್ನೂ ಯಾವುದನ್ನೂ ಸೂಕ್ಷ್ಮಿಸಿ ಸೂಚಿಸಿ ಬರೆದದ್ದಲ್ಲ. ಇವೆಲ್ಲ ಕೇವಲ ಕರ್ತೃವಿನ ಕೃತಕ ಕೃತ್ರಿಮ ಕಲ್ಪನೆಗಳು !!

ಬೆಲೆ ಒಂದೂ ಮುಕ್ಕಾಲು ರೂಪಾಯಿ

*

# ಪ್ರೋಲೀ ಕಿಟ್ಟೀ

---

## ದೃಶ್ಯ ೧

ಸ್ಥಳ— ಮುನಿಸಿಪಲ್ ಪಾರ್ಕಿನ ಒಂದು ಮೂಲೆ

[ ಒಂದು ಬಾಯಿ ಹಾರ್ಮೋನಿಯಮ್ಮಿನಲ್ಲಿ "ಲೇರಾಮುದ್ದುಲ ಗುಮ್ಮಾ" ಊದುತ್ತಾ ಕಿಟ್ಟಿಯು ಪ್ರವೇಶಿಸುವನು. ತೆರೆಯ ಹಿಂದೆ ಒಂದು ಸ್ಕಾಟು ದಳದವರು "Sree Rama's Strength in duty" ಎಂಬ ಹಾಡನ್ನು ಹಾಡುವುದು ಕೇಳುವುದು. ಕಿಟ್ಟಿಯು ಆ ಹಾಡನ್ನು ತನ್ನ ವಾದ್ಯದಲ್ಲಿ ಬಾರಿಸುತ್ತಾ ಕಲಿಯುವನು. ಸ್ಕಾಟುದಳದವರು ಪ್ರವೇಶಿಸುವರು. ]

**ರಾಘು** — ಯಾರೋ ಅದೂ? ನಮ್ಮ chorus ಬಾರ್ಸೋದು?

**ಕಿಟ್ಟಿ** — (ನಿಂತಿದ್ದ ಹಾಗೆಯೇ) ನಾನು (ಆತ್ಮಗತಂ) ಏನಪ್ಪಾ, ಇದ್ ತಕ್ರಾರು? (ಹಿಂದಕ್ಕೆ ತಿರುಗಿ... ಪ್ರಕಾಶ) **ನಾನು** (ಸ್ಕಾಟು ದಳವನ್ನು ಒಂದು ಕ್ಷಣನೋಡಿ.... ಬಿರುಸಾಗಿ) **ನಾನ್ ಕಣೋ!**... (ಎರಡು ಹೆಜ್ಜೆ ಮುಂದಿಟ್ಟು) **ನಿಮ್ಮಪ್ಪಾ ಕಾಣೋ!** ......(ರಾಘು ಸ್ವಲ್ಪ ಹೆದರಿ ಹಿಮ್ಮೆಟ್ಟುವನು ಅವನ ದಳವೂ ಹಿಮ್ಮೆಟ್ಟುವುದು. ಕಿಟ್ಟಿಯು ಮತ್ತಷ್ಟು ಮುಂದುವರಿಯುವನು) ನಿಂ ತಾತನೋ! (ಅಂಗಿಯನ್ನು ಬಿಚ್ಚುತ್ತಾ) ನಿಮ್

ಮುತ್ತಾತನೋ !..... (ತನ್ನ biceps ಕುಣಿಸುತ್ತಾ) ನ್ಯೆನೋಡಿ ಮಾತಾಡೋ ಮುರ್ಗೈ !!

[ ದಳದವರು ಒಂದು ಬಾರು ಹಿಮ್ಮೆಟ್ಟುವರು ]

**ಮಗೂ** — (ಪಕ್ಕದವನೊಡನೆ) ಮುರ್ಗೈ ಅಂದ್ರೇನೋ ಅಪ್ಪೂ ?

**ಪಕ್ಕದವನು** — ಅದು ತುರಕ್‌ನಲ್ಲಿ ಕೋಳೀಗೆ ಹೆಸ್ರೋ !

**ಮಗೂ** — ಹಾಗಾದ್ರೆ "ಜಂಬದ್‌ಕೋಳೀ"ಂತಿಟ್ ಹೆಸ್ರು ಹ್ಯಾಗೆ ಗೊತ್ತೋ ಇವನ್ಗೆ ?

**ರಾಘು** — (ಮಗುವಿನ ಕಡೆ ತಿರುಗಿ) ಹೇಳ್‌ಕೊಡೋ ನೀನು.....treacherous fellow !.. (ಗಟ್ಟಿಯಾಗಿ ಜೊತೆಯುವರೊಂದಿಗೆ) ಒದಿಯೋಣ್ರೋ ಇವನ್ನ !

[ ಕಿಟ್ಟಿಯು ಕಡೆಗೆ ಮುಂದಕ್ಕೆ ಬರುವನು ]

**ಕಿಟ್ಟಿ** — (ಅವನನ್ನು ಹಿಂದಕ್ಕೆ ತಳ್ಳಿ, ಅಪ್ಪೂವನ್ನು ನೆಲಕ್ಕೆ ಕೆಡವಿಕೊಂಡು ಕೂಗುತ್ತಾ) ಘಸೀಟ್ರೇ ಇಸೆ !!

**ಅಪ್ಪೂ** — (ನಿರೋಧಿಸುವ ಸ್ವರದಲ್ಲಿ) ಯಾಕೋ ?

**ಕಿಟ್ಟಿ** — ಯೇ೯ ಯಾಕೋ ! ಲೋ ! ಹಿರಣ್ಯ ಕಶಿಪೂಗ್ ಕೂಡ ಗೈರತ್ ಇರ್ಲಿಲ್ಲಕಣೋ ! ನರಸಿಂಹ ಹೊಟ್ಟೆ ಬಗೆದಾಗ ಯಾಕೋಂತ್ ಸವಾಲು ಹಾಕೋಕೆ ! (ನೆಲಕ್ಕೆ ಅದುಮುತ್ತಾ) ಕದಲ್‌ಬೇಡವೊ ಕೇಕ್ಡಿ ! (ಅವನ ಜೇಬುಗಳನ್ನು ಹುಡುಕುವನು.)

**ಅಪ್ಪೂ** — ಯೇನೋ ಇದು ನಿನ್ ಹಾಳು ಜಫ್ತಿ.

*

**ಕಿಟ್ಟಿ** — (ಅಪ್ಪೂವಿನ ಜೇಬಿನಲ್ಲಿದ್ದ ಸರಕನ್ನು ಬಾಯಿಗೆ ಹಾಕಿಕೊಳ್ಳುತ್ತಾ) My God! (ಆನಂದದಿಂದ) ಕಾರ್ದವ್ಲಕ್ಕಿ! (ಕೆಳಗೆ ಬಿದ್ದಿದ್ದವನೊಡನೆ ಸ್ವಲ್ಪಅಸಹ್ಯದಿಂದ) ಏರ್ ಯಣ್ಣೇನೇನೋ?

**ಅಪ್ಪೂ** — ತುಪ್ಪಾಕಣೋ . (ಬಿಡಿಸಿಕೊಳ್ಳಲು ವ್ಯರ್ಥವಾಗಿ ಯತ್ನಿಸುತ್ತಾ) ...ಬಿ ಡೋ!

**ಕಿಟ್ಟಿ** — Good! for the body! ಯಾರಂಗ್ಡೀದೋ?

**ಅಪ್ಪೂ** — ಅಲ್ಲಕಣೋ... ಮನೇಲಿ ಮಾಡಿದ್ದು... ನಮ್ಮಜ್ಜಿ! ಯಾಕೋ ನಿಂಗದೆಲ್ಲ?

**ಕಿಟ್ಟಿ** — ಅಜ್ಜಿ ಮಾಡಿದ್ರೋ!? ಏರ್ ರವಾರವೆ ದೋಸೆಗಳು ಮಾಡ್ಲೀ ಬಳೀಪೇಟೆಯೋರು after all "ಅಜ್ಜಿಗಳ ಮುಂದೆ ಅಣ್ಣಾಯ್ಯಾಪ್ಗಳಿಂ!!" (ಅಪ್ಪೂವಿನೊಡನೆ) ಲೋ! ನಿಮ್ಮ motto ಏನೋ?

**ಅಪ್ಪೂ** — (ಬಿಡಿಸಿಕೊಳ್ಳಲು ಯ ತ್ನಿ ಸು ತ್ತಾ) .... .... "Be Preparedoo". ಬಿಡೋ!

**ಕಿಟ್ಟಿ** — (ಅಪ್ಪೂವಿನ ಮುಖವನ್ನು ಹಿಡಿದು ತಿರುಗಿಸಿ ಕೊಂಡು) ಓಹೋ! ಈಗ ಗುತ್ತರ್ಸಿಕ್ತು! .. ನೀನು ರಾಮ್ ರಾಯ್ರು ಮಗನಲ್ವೇನೋ? ಅಶ್ವತ್ಥ್ ಕಟ್ಟೇಮನೆ?... ದಿನಾ ರಾತ್ರಿ.... ಏಳ್ಗಂಟೆ ಹೊತ್ತಿಗೆ ನಿಮ್ಮಪ್ಪಿಗೆ ರೀಡಿಂಗ್ ರೂಮಿಂದ Paper ತರ್ತೀಯಲ್ವೇನೋ... ಇನ್ಮೇಲೆ ದಿನವಹಿ.... ಕಟ್ಟೆ ಹತ್ರ ನಾನೂ 'Be Prepared' ಆಗಿರ್ತೀನೆ . (ಅವನನ್ನು ಒದರಿ) ನೀನು .... ನಾಲ್ಕು ...... ಹಿಡಿ ಕಾರ್ದವ್ಲಕ್ಕಿ ..... ಜೋ ಬೀ ಲ್

ಹಾಕ್ಕೊಂಡು Be Preparedoo! ಗೊತ್ತೇ! ಹೂಂ (ಆತ್ಮಗತಂ) ಇನ್ನೇನು? ..... (ಪ್ರಕಾಶ) ಹೂಂ......ಆ choru ಇನ್ನೊಂದು ಸಲ ಕಿಲುರ್ ...... ಕಲ್ತುಕೊಂಡ್‌ಬಿಡೋಣ!

[ ಅಪ್ಪೂ ಕಣ್ಣೀರನ್ನು ಸುರಿಸುತ್ತಾ, ಆ ಹಾಡನ್ನು ಕಿರಲುವನು ಕಿಟ್ಟಿಯು ಅದನ್ನು ಕೊಂಚ ಕೊಂಚವಾಗಿ ಕಲಿಯುವನು ]

**ರಾಗ—ಇಂಗ್ಲಿಷ್ ನೋಟು   ತಾಳ—ಏಕ**

Sree Rama's Strength in duty
ಸ ರಿ ಗ ಗ ಗಾ ರಿ ಸಾ ಸಾ

Sree Krishna's love devotion
ಸ ಗಾ ಗ ಗ ರಿ ಗ ಪಾ ಮ

Give unto us the Pattern of
ಗ ರಿೀರಿ ರಿ ಸ ರಿೀರಿ ರಿ

India's Perfection for e'er for e'er
ರಿೀ ರಿರಿ ಗಮಾಗ ರಿ ಸಾ ರಿ ಸಾ

In danger and distress
ರಿ ಗಾಗ ಗಾ ರಿಸಾ

There's none to be compared
ರಿ ಗಾ ಮ ಗಾ ರಿ ಸಾ

With the Lads of India's Brilliant Star
ಗ ಮ ಪಾ ಪ ಪಾ ಪ ಪ ಮ ಗ ಮಾ

Th'lads of India's Brilliant Star
ಪಾ ಪ ಪಾ ಪ ಮ ಗ ರಿ ನಿ

With their motto "Be prepared"
ದ ದ ಧಾ ಮ ಗಾ ರಿಸಾ

**ಕಿಟ್ಟಿ** — (ಅಪ್ಪೂವನ್ನು ಎತ್ತೊಗೆಯುತ್ತಾ) ಇನ್ ಹೆದರ್ದೆ ನಿಂವ್ ಗೂಡು ಸೇರ್ಕೊಳ್ರೋ ಗುಗ್ಗುಗಳಾ! ...ಇನ್ ನನ್ನಂಥಾ ಸಾಧುಗಳ್ನ ಸತಾಯಿಸ್ ಬೇಡ್ರೋ!

[ ಹಾಡನ್ನು ಬಾರಿಸುತ್ತಾಹೊರಡುವನು ]

**ರಾಘು** — ಯೋ c o w a r d s ರೋ! ಒಬ್ಬನ್ಗೆ ಹೆದರ್ಕೊಂಡು!?

**ಮಗೂ** — ನಾವೆಲ್ರೂ ಅವನ ಮೇಲೆಗರಿ ಬೀಳಬೇಕೂಂತಿದ್ವು. ಆದ್ರೆ ನೀನು ಹಿಂದೆ ಹಿಂದೆ ಜರಗ್ತಾ ... ನಮ್ಮನ್ನೇ ಹಿಂದಕ್ಕೆ ದಬಾಯಿಸ್ತಾ back ಮಾಡುತಿದ್ರೆ ನಾವೇನು ಮಾಡೋದೋ?

**ಅಪ್ಪೂ** — ಲ್ರೋ! ಸಾಕ್ರೋಲ್ರೋ ನಿಂ ಸಾವಾಸ!!

**ರಾಘು** — ಒಳ್ಳೇ ರೋತಿ ಕಣೋ ನೀನು! ಯಾಕೆ ಒದ್ದಾಡ್ತೀಯೋ?

**ಅಪ್ಪೂ** — ಯಾಕೆ!!? ಕೈಕಾಲ್ ಮೈಯಲ್ಲಿ ಒಂದ್ ಎಮ್ಕೆ ಬಾಕಿ ಇಲ್ಲದೆ ಬಗ್ಗಿಸಿಬಿಟ್ಟು ಹೋಗಿದಾನೆ—ಅವ್ನು! ನಾಚ್ಕೆ ಇಲ್ದೆ ಅವನ್ಗೆ ಹೆದರ್ಕೊಂಡು ಒಂದಿಷ್ಟು help ಕೊಡ್ದೆ .. ಕಣ್‌ಕಣ್ ಬಿಟ್ಟು ನಿಂತುಬಿಟ್ಟು ಈಗ ನನ್ ರೋತೀಂತ ಕೂಗಿ! ಹೋಗ್ರೋ ಲ್ರೋ......... ಹೆಣ್ಣಕ್ಸ್! ......Every one! .........ಇನ್ನು ಅವ್ನು Be Prepared ಬೇರೆ ಹೇಳಿ ಬಿಟ್ಟು ಹೋಗಿದಾನೆ.. ...ದಿನ ಅರ್ಥಾಣೆ ಹಾಕಿ ಒಂದು ಕಾರ್ಡ್ವಲ್ಕಿ ಘಂಡುಗಿಂಡು ಪಾಕ್ತಾ ಮಾಡಿದ್ರೋ..... ಬದ್ಕಿದ್ರಿ! ..... ಇಲ್ದೆ ಇದ್ರೆ ...ದೇವ್ರೇ ಗತಿ!......

**ಮಗೂ** — ಯಾರೋ ಅವ್ನು?

**ಅಪ್ಪೂ** — ಕಿಟ್ಟೀನೋ ಅವನ ಹೆಸ್ರು! ಪೋಲೀ ಕಿಟ್ಟೀ ನಂ ಕೇರೀಲೆಲ್ಲಾ famousoo. ತುರ್ಕರ್ ಜತೇಲೆಲ್ಲಾ ಕು ಮಾಡತಾನವ್ನು .. .ಕಸಾಬರ್ ಜತೇಲಿ ...... ಖಬೂತರ್! ಅಂದ್ರೇನೇ? ಪಾರ್ವಾಳ್ದ ಹಕ್ಕಿ ಹಾರ್ಸ್ತೋ ಘಟಿಂಗ ಕಣೋ ಅವ

**ಮಗೂ** — ಏ಼ fine biceps ಓ ಅವನ್ದು!

**ರಾಘೂ** — ಆಗ ನಮ್ಮೆಲ್ರಿಗೂ ಮೋಕ್ಕಾಮಾಡ್‌ಬಿ ಹೋದದ್ದು ಮರೆತುಬಿಟ್ಟು ಈಗ ನಾಚ್ಕೆ ಇಲ್ದೆ praise ಮಾಡ್ತಿ ಅವನ್ನಾ! treacherous fellow!

**ಮಗೂ** — Praise ಏನೋ!... ಇದ್ದದ್ದು ಹೇಳ್ದೇ! ಈಗೇ ಮಾಡೋದೂ ..ಇವ್ನು ಹಿಡ್ಕೊಂಡು ದಿನಾ ಹೀಗೆ ಸತಾಯಿಸ್ತಿದ್ದ

**ರಾಘೂ** — ನಾಳೆ ಬರ್ಲಿ.. .ನಾವೇಲ್ರೂ ಸೇರ್ಕೊಂಡು ನರಬ ಇಟ್‌ಬಿಡೋಣ ಅವನ್ನಾ!

**ಅಪ್ಪೂ** — ನಾಳೆ ನರಬಲೀನೋ.. ಈವತ್ತಿನ ಹಾಗೇ!? ಈವತ್ತು ಕಾರ್ದವ್ಲಕ್ಕಿ ಕಸ್ಕೊಂಡು ಹೋದದ್ನ ನೋಡ್ತಿದ್ರಲ್ಲಾ ಕಣ್ ಬಾಯಿ ಬಿಟ್ಕೊಂಡು! ಹಾಗೇ ನಾಳೇನೂ!?

**ರಾಘೂ** — ಮತ್ತೇನು ಮಾಡು ಅಂತೀರ್ರೋ? S. M. ಹ complain ಮಾಡೋದೆ?

**ಅಪ್ಪೂ** — ಹೂಂ! complain ಮಾಡು!.. ಆರುಜ cubsoo ಒಬ್ಬನಕೈಲಿ ಒದೆ ತಿಂದುಕೊಂಡುಬಂದು S. M. ಹ

complain ಮಾಡಿದ್ದು ಬೈಲಿಗೆ ಬೀಳ್‌ಲಿ.... Brigade ಕೈಲಿ ನಗ್ಸಿ ಉಗಿಸ್ಕೊಳ್ಳಿ !

**ರಾಘು** — ಮತ್ತೆ ಇಂದಿನ ಹಾಗೆ ಈ ಪೋಲಿ ಹೊಂಚು ಹಾಕ್ಕೊಂಡಿದ್ದು ಮೇಲಿ ಬೀಳ್‌ತಿದ್ರೆ ಏನು ಮಾಡೋದೋ ?

**ಮುಗೂ** — ಇದಕ್ಕೆಲ್ಲ ಒಂದೇ ದಾರಿ ಕಣ್ರೋ. ಅವನ್ನೂ Brigadeಗೆ ಸೇರಿಸ್ಕೊಂಡ್‌ಬಿಡೋಣ ಸೇರಿದಮೇಲೆ Brother scoutನ ಸತಾಯಿಸ್ದ ಹಾಗೆ ನೋಡಿ ಕೊಳ್ಳೋದು S. M. ಭಾರ! ಅದೂ ಅಲ್ದೆ ಹಾಗೊಬ್ಬ strong feller ಇದ್ರೆ (ಕಣ್ಣುಗಳಲ್ಲಿ ಸ್ವಲ್ಪ ಸಂತೋಷವನ್ನು ಸೂಚಿಸುತ್ತಾ) running, ........ wrestling, Brigade sports ನಲ್ಲಿ ಒಂದು cupoo...... prizeoo ಬಾಕಿ ಇಲ್ದೆ ನಂ patrol ಏ ಲಪ್ಟಾಯಿಸ್ಬೋದು .

**ಅಪ್ಪೂ** — GOOD IDEA ಕಣೋ !

**ರಾಘು** — ಅವನು ಸೇರ್ತಾನೋ ಇಲ್ರೋ. ಅದೂ ಅಲ್ದೆ ಈ hopeless ಪೋಲೀನ ನಂ ಜೊತೇಲಿ ಸೇರ್ಸಿಕೊಂಡೂ .. ?

**ಅಪ್ಪೂ** — ಲ್ರೋ! ನಿಮ್ಮ Scout Brigadeಗೆ ಸಲಾಂ ! ಈಗ ಅವನ್ಸೇರಿಸಿಕೊಳ್ಳೋಕೆ ಅಸಹ್ಯ ಪಟ್ಕೊಂಡು ಕೂತಿರಿ. ನಾಳೆ ಅವನು (ಮುಷ್ಟಿಗಳನ್ನು ತೋರಿಸುತ್ತಾ) ಚೌಕ್ದಲ್ಲಿ ನಿಂತ್ಕೊಂಡು ಉಂಡೆಗಳ್ ಬಟ್ವಾಡೆ ಮಾಡೋವಾಗ ನಾನು ಅಲ್ಲಿರೋಲ್ಲಪ್ಪ !

**ರಾಘು** — ಹಾಗಾದ್ರೆ ಏನ್ಮಾಡು ಅಂತೀರೋ ?

**ಅಪ್ಪೂ** — ಮುಗೂನ ಮೆಲ್ಲಗೆ ಕಳಿಸ್ಬಿಟ್ಟು ಅವನ್ನ ತಾರೀಫ್ ಗೀರೀಫ್ ಮಾಡಿ ಸೇರೋಕೆ ಒಪ್ಕೊಳ್ಳೋಹಾಗೆ ಮಾಡ್ಬೇಕು ... ಮಾಡಿದ್ರೇನೆ ವಿಮೋಚ್ನೆ ನಮ್ಗೆಲ್ಲಾ!

**ರಾಘು —** ಮಗೂ ಚಿಕ್ಕೋನು ಕಣೋ...... ಅವನ್ಕೈಲಿ ಎಲ್ಲಾದ್ರೂ ಸಿಕ್ಕೊಂಡು.....ಪಾಪ!

**ಅಪ್ಪೂ —** ಅದೇನು ಹೆದರ್ಕೆ ಇಲ್ಲ.....ಚಿಕ್ಕೋರ ಮೇಲೇನೂ ಛಲ ಇಲ್ಲ ಅವನ್ಗೆ.. "ಸಾಧುಗಳ್ನ ಸತಾಯಿಸ್ಬೇಡ" ಅಂತ ಕಿರಿಚ್‌ತಿರ್‌ತಾನೆ ಹಗ್ಲೂ ಇರ್ಲ್ಲೂ!

**ರಾಘು**-(ಮಗುವಿನೊಡನೆ) ಹೋಗಿ try ಮಾಡ್ತೀಯೇನೋ ಗುಬ್ಬಚ್ಚಿ!

**ಮಗೂ —** ಹೂಂ ಕಣೋ....(ಹಲ್ಲು ಕಿರಿಯುತ್ತಾ ಪಕ್ಕಕ್ಕೆ ಸರಿಯುತ್ತಾ) ಕೋಳಿ!.....ಕೋಳೀನ್ನೋದಕ್ಕೆ ಏನಂದ ಅಪ್ಪೂ ಮುರ್ಗೈನೆ!

**ಅಪ್ಪೂ —** ಮುರ್ಗ್ಯ ಕಾಣೋ.. ತುರಕ್ನಲ್ಲಿ ಫೇಟವ್ನು!

[ ಎಲ್ಲರೂ ನಗುವರು ]

**ರಾಘು —** Shut up! I say! ಯಂಕೆಗಳ್ನ ಮುರಿದ್ಹಾಕ್‌ಬಿಟ್ಟೇನು ಬರೋಕೋಪ್ದಲ್ಲಿ.

**ಅಪ್ಪೂ —** ಓಹೋ! ಕೋಪ ಬೇರೆ ಬರುತ್ತೆ.. ಸಿಂಗೀಗ! ನನ್ನ ಕಾರ್ದವ್ಲಕ್ಕೀನ ಕಸ್ಕೊಳ್‌ತಿದ್ದಾಗ.. ಗೊರ್ಕೆ ಹೊಡೀತಿತ್ತೀನೋ ನಿನ್ಕೋಪ!.. ಬರ್ರೊ ಹೋಗೊಣ ಮನೇಗೆ!

[ ಸ್ಕೌಟುಗಳು ಸಾಲಾಗಿ ನಿಲ್ಲುವರು ]

**ಮಗೂ —** (ಕಾಡಿಸುತ್ತಾ)chorus ಶುರು ಮಾಡು ರಾಘೂ!

**ರಾಘು —** (ಹಲ್ಲುಕಡಿಯುತ್ತಾ) ಇನ್ನು ಅವನ್ಮಾತೆತ್ತಿದ್ರೆ.....

(ಮುಷ್ಟಿಗಳನ್ನು ಬಿಗಿ ಹಿಡಿಯುವನು)

**ಮಗೂ —** ಅವನ್ಮಾತು ಯಾರೋ ಎತ್ತಿದ್ದು ? ... ಒಳ್ಳೇ ಹುಳ್ ಹುಳ್ಳೋ ನಿನ್ಮನಸ್ಸೂ...

**ರಾಘು—**ಆ ಪೋಲೀನ ಹಿಡ್ದು ... ಮೆಲ್ಲಗೆ ಗಿಲೀಟ್‌ಮಾಡಿ ಸೇರೋಕೆ, influence ಮಾಡೋ ?

**ಮಗೂ —** ಹೂಸೋ !

[ಎಲ್ಲರೂ ಹೊರಡುವರು]

---

## ದೃಶ್ಯ ೨.

[ಸ್ಥಳ—ಬೀದಿ. Magoo surrounded by his patrol]

**ರಾಘು —** ...ಏನೋ ? ನೀನು ಹೇಳೋದೊಂದೂ ಅರ್ಥ್ವಾಗೋದಿಲ್ಲ ! 'ಸೇರೋದಿಲ್ಲಾಂ'ತ್ಲೂ ಅಂಬಾಂತೀಯ ನಿನ್ನಹಾಳ್ ಕಾರ್ದ್ವಕ್ಕಿ "wasteoo ಆಗ್ಲಿಲ್ಲ" ...ಅಂತೀಯ, ಏನೋ ನೀನು ಹೇಳೋದರರ್ಥ ?

**ಮಗೂ —** ಸುಧಾರ್ಸಿಕೊಳ್ತೀನೆ ಸ್ವಲ್ಪ ಇರ್ರೋ ಓಡಿ ಬಂದಿಧೇನೆ...

**ಅಪ್ಪೂ —** (ಮಗುವನ್ನು ಕುರಿತು) ನಡೆದದ್ದೇನ್ ಸಿಧಾನ ವಾಗಿ ಹೇಳೋ!...

**ಮಗೂ —** ನಡೆದದ್ದೇನ್ರೋ! . ಎತ್ರೋತ ಒಂದಾಣೆ ಕಾರ್ದವ್ಲಕ್ಕಿ ಛಟ್ಟೆ! ..ಜೇಬಲ್ಲಿ ತುಂಬ ತುಂಬಿಕೊಂಡು ಆ ಬೀದಿ ಕೊನೇಲಿ ಕಾದಿದ್ದೆ..... ಬಂಡಿ ತುಂಬಾ ಭಕ್ಷಣ ತುಂಬ್ಕೊಂಡು ಬಕಾಸುರನಿಗೆ ಕಾದ್ದಾಗ! ಬಾಯಿ ಹಾರ್ಮೋನಿಯುಮ್ನಲ್ಲಿ ನಮ್ಮ ಕೋರಸ್ ಕೇಳಿಸ್ತು... ನನ್ಗೆ ಯಾಕ್ರೋಪ್ಪ! ಅವನ biceps ಜ್ಞಾಪ್ಸ್ಕೊಳ್ತುತ್ಲೂ ಕಂಬಿ ಕಿತ್ತು ಬಿಡೋಣಾನ್ಸ್ತು ಆದ್ರೆ ನೀವಿಲ್ಲಿ ನನ್ನ..... ತರಾಟಿಗೆ ತಕೊಳ್ತೀರಅಂತ ನಡುಗ್ತಾನೇ ನಿಂತಿದ್ದೆ ಬಂದಾ ನೋಡು ಭೂಪ್ತಿ ಲೋ! ಒಳ್ಳೇ born scoutoo ಕಾಣ್ರೋ ಅವನು! ಪಾಪ. .ಜ್ವರವಂತೆ ಅವನ sister ಗೆ . ಹೋದ ಇಂಪ್ಲುಯೆನ್ಸ ಗಲಾಟೇಲಿ husband ನ ಕಳ್ಕೊಂಡ ಳಂತೆ .. ಈಗ ಅವಳ್ಗೆ ಜ್ವರವಂತೆ ಮನೇಲಿ ಔಷ್ದ ಕೊಂಡ್ಕೊಂಡು ಹೋಗ್ತಿದ್ದ.... ಲ್ರೋ! ಅವನ್ಮನ್ಗೆ ಖರ್ಚಿಗೆ ದುಡ್ಡು ಹೇಗೆ ಕಮಾಯ್ಸ್ತಾನೆ ಗೊತ್ತೇ? ಬೆಳಿಗ್ಗೆ ಆರ್ಫಂಟೀಗೆ ಹಾಜರು ರೈಲ್ವೆ ಸ್ಟೇಷನ್ನಲ್ಲಿ Family ಜೊತೇಲಿ ಬಂದೋರ್ನ ಗಲೀಟಾಗಿ ತೋಟ್ಟಪ್ನೋರ್ ಛತ್ರಕ್ಕೆ ಕರಕೊಂಡು ಹೋಗೋದು ..ಸಾಮಾನು ಗೀಮಾನು ಸಾಗ್ಸೋದು ಊಟಕ್ಕೆ ಗೀಟಕ್ಕೆಲ್ಲಾ arrange ಮಾಡೋದು . ಈ ಬಾಬತ್ನಲ್ಲಿ 2 ಆಣೆ 4 ಆಣೆ ಹೀಗೆ ಸುಲ್ಕೊಂಡು ದಿನಕ್ಕೆ ಒಂದು ರೂಪಾಯಿ ಕಮಾಯ್ಸಿ ಬಿಡ್ತಾನಪ್ಪ! ಮನೇಲೆಲ್ಲಾ poor ಅಂತೆ ಪಾಪ!. Father pensionoo! ಬಲು sad history ಕಣ್ರೋ (Smiling proudly) ಕುಸ್ತೀನೂ ಕಲಿಸಿಕೊಡ್ತಾನಂತೆ .. ಅವನ biceps ಹಾಗೆ ನನ್ನೂ ನೂ ತಯಾರುಮಾಡಿ ಕೊಡ್ತೇನೇಂದ ಕಣ್ರೋ!

**ರಾಘು —** ನಿನ್ biceps ಬಲ್ತುಕೊಂಡ್ರೆ ನಮ್ಗೇನು ಬಂದ ಹಾಗೆ ಆಯ್ತೋ ! ಹೋದ ಕೆಲ್ಸ ಏನಾಯ್ತೋ ?

**ಅಪ್ಪೂ —** ನೀನವ್ನಿಗೆ ಕಾರ್ಡ್ವಸ್ಲಕ್ಕಿ ಲಂಚಕೊಟ್ಟು ತಾರೀಫ್ ಮಾಡ್ದಾಕ್ಷಣವೇ ನಮ್ಮನ್ನ ಬಿಡ್ತಾನೇನೋ ? ಅವ್ನೇನು patrolಗೆ ಸೇರ್ತಾನೋ ಇಲ್ವೋ ? ಅದು ಬೊಗಳ್‌ಮುಂಚೆ !

**ಮಗೂ —** ಅವನ್ಗೇನೋ ಅಪ್ಪ Boy Scout ಸೂಂದ್ರೆ ಬೆಂಕಿ ಅವನು ಹೇಳಿದ್ದು ಇಷ್ಟು 'ನಿನ್ ಸತಾಯ್ಸೋದಿಲ್ಲ Scout ಆಗೋಮಾತು ಎತ್ಬೇಡ ನನ್ನ ಹತ್ರ ನಿಂ ಜಂಬದಕೋಳಿ ನನ್ನ ಕೈಗೆ ಸಿಕ್ಲೀ' (ರಾಘುವಿನೊಡನೆ) ಅವನ್ಹೇಳಿದ್ದೋ ! 'ಚಮ್ಡಾ ಯೆಗರ್ಸಿ ಚರಂಡೀಲಿ-ಅದೆಂಥಾದ್ದು ?-ಸುಲಾಯ್ಸೋದಂತೆ !' ಆದೇನ್ ಅಪ್ಪೂ ?

**ಅಪ್ಪೂ —** ತುರಕ್ನಲ್ಲಿ ಮಲಗ್ಸೋದೋ !

**ಮಗೂ —** ಹೂಂ, ಆದ್‌ಮಾಡ್ತಾನಂತೆ ನಿನ್ಗೆ !

**ರಾಘು —** (in nervous tones) ಅಲ್ಕಣೋ, ಒಂದಾಣೆ ಕಾರ್ದವ್ಲಕ್ಕಿ ಮಾಡಿಸಿಕೊಟ್ಟು ನಿನ್ನ ಕೈಲಿಟ್ಟು. ಈಗ ನನ್‌ಚಮ್ಡಾ !? ಹೂಂ ! ಒಳ್ಳೇ treacherous fellow ಕಣೋ ನೀನು ಬರೋ ಕೋಪದಲ್ಲಿ ! (ಹೊಡೆಯುವನಂತೆ ಮಗುವಿನ ಬಳಿ ಬರುವನು)

**ಅಪ್ಪೂ —** (ರಾಘುವನ್ನು ಹಿಂದಕ್ಕೆಳೆಯುತ್ತಾ) ಹುಷಾರೋ ಲೋ ಹುಚ್ಚು ! ಇನ್ನು ಅವನ್ಹೋಗಿ ಆ ಪ್ಪೋಲಿ ಹತ್ರ ನೀನು ಹೊಡೆದೇಂತ ಚಾಡಿ ಹೇಳಿ ಛೂ ಬಿಟ್ಟುಬಿಡ್ಲಿ ನಿನ್ ಮೇಲೆ ಆವನು ಮೊದಲೇ ನಿನ್ನ ಚಮ್ಡಾನೆಗರ್ಸಿ ಚರಂಡೀಲಿ ಸು ಲಾ ಯ್ಸೋ ಮಾತೆತ್ತಿದಾನೆ....! ?

**ರಾಘು —** (ಹಿಂದಕ್ಕೆ ಸರಿಯುತ್ತಾ) ಹೌದೋ ! ಇರ್ತ್ತಿದ್ದೆ . . (ದಳದವರನ್ನು ಕುರಿತು ರುಗ್ಣ ಸ್ವರದಿಂದ) ಈಗ ನೋಡ್ರೋ ತಕ್ರಾರು ! ಅವನಿಗೆ ಹೆದರ್ತ್ತಿದ್ದ ದ್'ರ ಜೊತೇಲಿ.....ಈ ಗುಬ್ಬಚ್ಚೀಗೆ ಘಾಬ್ರಿ ಬೀಳಬೇಕಾಗಿದೆಯಲ್ಲೋ !?

**ಮಗು —** (ಹಲ್ಲುಕಿರಿದು) ಅಪ್ಪೂ ! ಲೇ ! ಈ ಕಾರ್ದ್ವಲ್ಲಕ್ಕಿ ನಿಮ್ಮಜ್ಜಿಕೈಲಿ special ಆಗಿ ಮಾಡ್ಸಿದ್ದೊಂದೇ .ಅದಕ್ಕೆ ನಿಮ್ಮಜ್ಜೀ ಗೊಂದು message ಕೊಟ್ಟಿದ್ದಾನೋ ಅಪ್ಪು !

**ಅಪ್ಪೂ —** (ಕಾತರದಿಂದ) ಏನೋ ಅದು ?

**ಮಗೂ**–"ಇನ್ನೆಷ್ಟು ದಿನ old fashioned ಕಾರ್ದ್ವಲ್ಲಕ್ಕೀನೆ ಮಾಡುತಿರೋದು ನೀವು? ಸಾಯೋಕೆ ಮುಂಚೆ ಒಳ್ಳೆ up-to-date ಆಗಿ ಹಲ್ವ ಥೊಂರೋಟು, ದೂಧ್ಪೇಡ ಮಾಡಿ, ನಿಮ್ಮ ಮೊಮ್ಮಗನಿಗೆ 'ಖಲಾಯ್ಸಿ' ಅಂದ್ರೆ—ತಿನ್ಸೋದು—ಅಲ್ವೇನೋ ? ...... ಹೂಂ ಖಲಾಯ್ಸಿ ಸಂತೋಷ ಮಾಡೋದು ಯಾವಾಗಾ " ಅಂತಂದಾಪ್ಪ ....ತಕೊಂಡು ಹೋಗಿ ತಲ್ಪಿಸಿ ಬಿಡೂಪ್ಪ message ನ!

**ಅಪ್ಪೂ —** (ತೀವ್ರವಾಗಿ ಆಲೋಚಿಸಿ, ರಾಘುವಿನೊಡನೆ) ರಾಘೂ ಥೊಂರೋಟೂನ್ನೂತ್ಲೇ ಒಂದು idea strike ಆಗುತ್ತೆ ಕಣೋ ! ಆ ಪಟಂಗನ್ ಸೇರಿಸ್ಕೊಳ್ಳೋಕೆ ಇನ್ನೂ ಒಂದು chance ಇದೆಯೋ .. ..... ಆದ್ರೆ (ಸಂಶಯ ಸೂಚಿಸುತ್ತಾ) ನೀನೇನ್ ಹೇಳ್ತೀಯೋ ?

**ರಾಘು —** ನಾನು ಹೇಳೋದೇನೋ..........ಬೊಗ್ಳೋ..... ತೋಚಿದ್ನ.

**ಅಪ್ಪೂ—**ಹಾಗಾರೆ ಸೊಲ್ಪಿರೋ.....(ಮಗುವಿನೊಡನೆ) ಲೋ ! ತಿರ್ಗ್ಗ ಯಾವಾಗ್ಲೋ ಅವನ್ನ ನೋಡೋದು ?

**ಮಗೂ**–ಓಹೋ! ಹೌದ್ರಪ್ಪ.....ನಿಮ್ಮನ್ warn ಮಾಡೋಕೆ ಮರ್ತುಬಿಟ್ಟಿದ್ದೆ "ಇನ್ನೊಂದು five minutes ನಲ್ಲಿ ಈದಾರೀನೇ ಬರ್ತೀನೇ...ನಿನ್ನ meet ಮಾಡ್ತೀನೇಂ"ದ ! (ದಳದವರೆಲ್ಲರೂ ಓಡಲು ಸಿದ್ಧವಾಗುವರು, ಅಪ್ಪೂ, ರಾಘು, ಅವರನ್ನು ಹಿಡಿದು ನಿಲ್ಲಿಸುವರು )

**ರಾಘು** — ಸ್ವಲ್ಪಿರ್ರೋ ಹೆಣ್ಣಿಕ್ಸ್ !–– (ಅಪ್ಪೂವಿನೊಡನೆ) ಅದೇನೋ ನಿನ್ನ idea, ಬೊಗಳೋದಾದ್ರೆ ಬೇಗ ಬೊಗ್ಳೋ . .

**ಅಪ್ಪೂ** — ಈಗ್ನೋಡೋ! ಈ ದಂರೋಟು, ದೂದ್ಪೇಡ, ಹಲ್ವಾಂದ್ರೆ ಅವನಿಗ್ ಪ್ರಾಣ . ಅವನು ಬರುತ್ಲೂನೂವೆ ಒಬ್ರು ಗಮನಿಸ್ಬೇಡಿ ನಿನ್ ಕೇಳ್ತೀನೆ "ಆ ಹೋದ್ rally ಗೆ ಡೆಲ್ಲಿ ಯಿಂದ ದೂದ್ಪೇಡ ತರಿಸ್‌ಕೊಟ್ರುಲ್ರಾ ಸ್ಕೌಟುಗಳಿಗೆಲ್ಲಾ, ಇನ್ನಾ ಬರೋ rally ಗೆ ಏನ್ ತರ್ಸಿ ಕೊಡ್ತಾರೋ" ಅಂತ ನಿನ್ನ ಕೇಳೋತ್ಲೂನೂವೆ, ನೀನು "ಬೊಂಬಾಯಿಂದ ಬಾದಾಮಿ ಹಲ್ವಾ ತರ್ಸ್‌ತಾರಂತೇ"ನ್ನು. ಆಗ ಮಗೂ, ನೀನು "ಲ್ರೋ ಹೀಗೆ ಮೂರ್ ಮೂರ್ ಟಿನ್ ಮಿಠಾಯಿ ಒಬ್ಬೊಬ್ಬ ಸ್ಕೌಟ್ಗೆ ಕೊಡ್ತಾ ಬರ್ತಾರಲ್ಲ rally ಲಿ Chief Scoutoo–ಬಲು ಖರ್ಚಾಗಬೇಕಲ್ವೇ" ಅನ್ನು . ಅದಕ್ಕೆ ನಾನು ."ಯುವರಾಜರ್ಗೇನಪ್ಪ, ಮೂರ್ ಟಿನ್ನಲ್ದಿದ್ರೆ ಮೂವತ್ ಟಿನ್ ಕೊಡ್ತಾರೆ, ಖುಷಿ ಬಂದ್ರೇ" ಅಂತೇನೆ.. ಇಷ್ಟೊತ್ತಿಗ ವನ್ಬಾಯಲ್ಲಿ ನೀರು ಕರ್ಗಿ ಬಂದುಬಿಡ್ತಾನೆ ನಂದಾರೀಗೆ ನನಗೆ ತಿಳಿದ ಮಟ್ಟಿಗೂ ಇದೊಂದೇ ದಾರಿ ಅಪ್ಪ! ಏನು ಹೇಳ್ತೀಯಾ ?

**ರಾಘು** — ಹೇಳೋದೇನು, try ಮಾಡೋಣ್ವೋ!

**ಅಪ್ಪೂ**—ಹಾಗಾರೆ ಚನ್ನಾಗಿ rehearse ಮಾಡಿ ಬಿಡೋಣ ಒಂದೆರಡು ಸರ್ತಿ..

[ ಎಲ್ಲರೂ ಈ ಮಾತುಗಳನ್ನು ಸರಿಯಾಗಿ ಮೂರು ಸಲ ಅಭ್ಯಾಸ ಮಾಡಿಕೊಳ್ಳುವರು. ಬಾಯಿ ಹಾರ್ಮೋನಿಯಂ ಶಬ್ದ ಕೇಳುತ್ತಲೇ ತಮ್ಮ ತಮ್ಮ ಸ್ಥಾನಗಳಲ್ಲಿ ನಿಲ್ಲುವರು ; ಪೋಲಿ ಕಿಟ್ಟಿಯು ಸ್ಕೌಟು chorus ಬಾರಿಸುತ್ತಾ ಪ್ರವೇಶಿಸುವನು ; ದಳದವರು ಅವನಕಡೆ ನೋಡದೆ ನಿಂತಿರುವರು ]

**ಕಿಟ್ಟಿ —** (ಆತ್ಮಗತಂ) ಓಹೋ ! ಇದೇನಿಲ್ಲಿ ಜಮಾಯಿಸ್ಸಿದೆ. ಪಟಾಲಂ ಯುದ್ಧಕ್ಕೆ ಗಿದ್ಧಕ್ಕೆ ಹೊರ್ಡ್ತಾರೇನೋ ಕಾಣೆ...

**ಅಪ್ಪೂ —** ರಾಘೂ, ಹೋದ rallyಗೆ ನಮ್ಗೆಲ್ಲಾ ದೂದ್ಪೇಡ ದೆಹ್ಲಿಯಿಂದ ತರ್ಸ್‌ಕೊಟ್ರಲ್ರಾ. ಅದ್ನ ಜ್ಞಾಪಿಸ್ಕೊಂಡ್ರೆ... ನನ್ನ ಬಾಯ್ಲಿ ಈಗ್ಲೂ ನೀರು ಬರತ್ತೆ .

**ಕಿಟ್ಟಿ —** (ಆತ್ಮಗತಂ) ಅದು ಕೇಳುತ್ಲು ನನ್ನ ಬಾಯಲ್ಲೂ ನೀರು ಬರುತ್ತೆ ದೂದ್ಪೇಡ ! ತಕೋ ! ...... rallyಲಿ ಕ್ಯೊಟ್ರೋ ಇವ್ರಿಗೆ ? [ ಸದ್ದಿಲ್ಲದೆ ಪೆಟ್ರೋಲಿನ ಹಿಂದೆ ಬಂದು ನಿಂತು ಅವರ ಮಾತನ್ನು ಗಮನಿಸುವನು]

**ಅಪ್ಪೂ —** ...... ಇನ್ನು ಬರೋ rallyಗೆ.. ನಮ್ಗೆಲ್ಲಾ..... ಏನ್ಕೊಟ್ಕಾರೂ ರಾಘೂ ?

**ರಾಘು —** ಬೊಂಬಾಯಿಂದ ಬಾದಾಮ್ ಹಲ್ವ ಬರತ್ತಂತೆ

[ ಅಪ್ಪುವು ಮಗುವನ್ನು ಚಿವುಟಿ "ಹೇಳೋ" ಎಂದು ಅವನ ಕಿವಿಯಲ್ಲೂದುವನು ]

**ಮಗೂ —** ಲ್ರೋ ! .....ಹೀಗೊಂದೊಂದು rally ಗೂನೂ ಒಬೊಬ್ಬ ಸ್ಕೌಟ್‌ಗೂನೂ . . ಮೂರ್‌ಮೂರ್ ಸೀಮೆಯಣ್ಣೆ

ಟಿನ್ ತುಂಬ ಮಿಠಾಯಿ ಕೊಟ್ ಬಿಡ್ತಾರಲ್ಲಾ ... ಬಲು ಖರ್ಚಲ್ವೇನೋ Highness ಗೇ ?

**ಅಪ್ಪೂ** — ಅವರಿಗೇನಪ್ಪಾ? ಖುಷಿ ಬಂದ್ರೆ ಮೂವತ್ ಟಿನ್ ಕೊಡ್ತಾರಪ್ಪ!

**ಕಿಟ್ಟಿ** — (ಆತ್ಮಗತಂ) ಓಹೋಹೋ! ತಕೋ! ಮೂರ್ ಮೂರ್ ಟಿನ್ನೋ! ತಕೋ! ದೂಡ್ಬೇಡ, ಬಾದಾಮ್ ಹಲ್ವ!! ಹಾಗಾರೇನೋ sense ಇಧೆ Boy Scout movement ನಲ್ಲಿ! ಈಗ್ ಅರ್ಥ್ವಾಯ್ತು ಯಾಕಪ್ಪಾಂತ್ ಇದ್ದೆ ಹಿಂಡ್ ಹಿಂಡಾಗಿ ಸೇರ್ಕೊಂಡಿಧಾರೆ ಈ ಕುರಿಮರಿಗ್ಳೂಂತ ಓಹೋ! ಮೂರ್ ಮೂರ್ ಟಿನ್ನು ಮಿಠಾಯಿ! My God! (ಪ್ರಕಾಶ) ಲ್ರೋ! ಈರ್ರ್ಯಾಲೀಂತಿರಲ್ಲ, ಈ ಮಿಠಾಯ್ ಬಟ್ವಾಡೆ ಇದಕ್ಕೆ ಎಷ್ಟ್ ವರ್ಷ ಸರ್ವಿಸ್ ಹಾಕ್ಬೇಕೋ ನಿಮ್ಮ Scout ಬಾಬತ್ ನಲ್ಲಿ?

**ಅಪ್ಪೂ** — (ರಾಘುವಿಗೆ aside) ನೀನು ಬಾಯಿ ಬಿಡ್ಬೇಡ ನಾನು manage ಮಾಡ್ತೇನೆ (ಕಿಟ್ಟೀಗೆ) (aloud) service ಏನೋ Brigade ಗೆ ಸೇರುತ್ಲೂನೂವೆ ಎಲ್ರೂ ಒಂದೇ!

**ಕಿಟ್ಟಿ** — (ಮಗುವಿಗೆ) ಮಗೂ! ಲೋ! ಈ ಸೀಮೆಯೆಣ್ಣೆ ಟಿನ್ನೂಂದ್ಯಲ್ಲ . ಈ ಮೂರ್ ಮೂರ್ ಟಿನ್ನ್ಗಳ್ಗೂ ನಾವೇ ಪಾಕ್ಟಾ ಮಾಡ್ಕೊಂಡು ಹೋಗ್ ಬೇಕೋ rally rally ಗೂನೂ? .. ನಮ್ಮನೇಲ್ ಕೈಯೆಣ್ಣೆ ಕಣೋ ದೀಪಕ್ಕೆ

**ಅಪ್ಪೂ** — ಮಗುವಿಗೆ) ಅವರೇ ಕೊಡ್ತಾರೇನ್ನೋ ಬೇಗ

**ಮಗೂ** — (ಕಿಟ್ಟಿಗೆ)—ಅವರೇ ಕೊಡ್ತಾರೋ!

**ಕಿಟ್ಟಿ** — (ರಾಘು ಬಳಿಗೆ ಬಂದು) ಲೇ ಜಂಬದ್ಕೋ . ಅಲ್ಲ Commander ರೋ...... ಏನ್ ನೀನು? ಕರ್ನಲ್ಲೋ? ಜರ್ನಲ್ಲೋ? . . major ರೋ? ......... ಇನ್ಮೇಲೆ ನಿಮ್ಮನ್ನ ಸತಾಯ್ಸೋದಿಲ್ಲ ಕಣೋ ..ನನ್ನೂವೆ (ಆತ್ಮಗತಂ) ಈಗ್ ಸ್ವಲ್ಪ ಥರಾಯ್ಸೋದು ಮೇಲು .(ಪ್ರಕಾಶಂ) ನಿಮ್ಮಗುಂಪ್ಗೆ...ದಾಖಲ್ ಮಾಡಿಕೊಳ್ರೋ . (ರಾಘುವು ಹಿಂಜರಿಯುವುದನ್ನು ಕಂಡು) ಇಲ್ದಿದ್ರಪ್ಪ.. ನಾನೊಂದೇ ಮಾತ್ನಲ್ಲಿ ಹೇಳ್ಬಿಡ್ತೇನೆ ನೋಡಿ..... ನನ್ನೂ ಸೇರಿಸ್‌ಕೊಳ್ದೇ ಹೋದ್ರೋ . ನಿಮ್ಮೈಗೊಳ್ಳೇದಲ್ಲ.... ಮೈಗೆ...ಬುರುಡೇಗೆ ಚಮ್ತುಕ್ಕೆ ಒಳ್ಳೇದಲ್ಲಾ . ನಿಂ ತಬಿಯತ್ತಿಗೆ ತಕ್ಲೀಫು . ತಿಳಕೊಳ್ಳೀಪ್ಪ .

**ಅಪ್ಪೂ** — ಅದಕ್ಕೇನು ಕಿಟ್ಟೀ.....ಸೇರು... ಸೇರು (ಕಿಟ್ಟಿಯು ಕೈ ಹಿಡಿದು) ರಾಘೂ! ನಂಕಿಟ್ಟೀ... ಸ್ವಲ್ಪ roughoo ಆಷ್ಟೇ.. ಆದ್ರೆ ಒಳ್ಳೇ fine fellow ಕಣೋ.....ನಿನ್ಗಿನ್ನೂ ಗೊತ್ತಿಲ್ಲ... kind heartedoo ಅವನು... ...ಅವನು ಹೇಳೋ ಹಾಗೆ . ಅವನ್ ಸೇರಿಸ್‌ಕೊಂಡ್ರೆ .. ನಮ್ಗೆಲ್ಲ...ಒಳ್ಳೇದು ..

**ರಾಘು** — (ನಗುವನ್ನು ತಡೆದು) ಹಾಗಾರೆ ಬರ್ರೋ.. . S. M. ಹತ್ರ ಹೋಗೋಣ (ಕಿಟ್ಟಿಯ ಕೈ ಹಿಡಿದು) Come on, Kitty, dear boy!

**ಕಿಟ್ಟಿ** — ತಕೋ! Dear boy ಆವಾಗ್ಲೇ! .. ಲ್ರೋ.....! ಇನ್ನು ಯಾರೋ S. M. ಅನ್ನೋದು..... Scout major?.... ನಿಂ commander ರೋ? ಸೊಂಟದಲ್ಲಿ ಏನಾದ್ರೂ sword ಗೀಡ್ರ್ ಸಿಕ್ಸಿಕೊಂಡಿರ್ತಾರೇನೋ?

**ಅಪ್ಪೂ** — ಇಲ್ಲ, ಕಣೋ. Sword ಸಾಣೇಗೆ ಕಳ್ಸಿದಾರೆ ಬಾರೋ, ಯೋಚ್ನೆ ಏನು (ಇತರ ಸ್ಕಾಟುಗಳಿಗೆ) ಬರ್ರೋ. .. ಎಳಕೊಂಡು ಹೋಗ್ಬಿಡೋಣ ಇದೇ chanceoo

[ಸ್ಕಾಟುಗಳಿವನನ್ನು ಎಳೆಯುವರು.]

**ಕಿಟ್ಟಿ** — (ನಗುತ್ತಾ) ಲ್ರೋ? ಇದೇನೋ ಮೆಲ್ಲಗೆ ಗಿಲೀಟ್ ಮಾಡಿ ಯಾರಹತ್ರ ಎಳ್ಕೊಂಡುಹೋಗ್ತೀರೋ ಏನೋ . . ಏನ್! ಬಲೀ ಗಿಲೀ ಕೊಡ್ತೀರೇನ್ರೋ! ದೇವ್ರಿಗೇ ಗೊತ್ತು.

**ಮಗೂ** — (ಆನಂದದಿಂದ) ಕಿಟ್ಟೀ ನಂ Brigadeಗೆ Band master ಆಗಿಹೋಗ್ರೋ. ನೀನುಬಾರ್ಸು chorus .. ನಾವೆಲ್ಲರೂ ಬಾಯುಲ್ಲಿಕಿರ್ಚ್ಕೊತಾಬರ್ತೀವೆ ಜೊತೇಲಿ . .. ರಾಘೂ! chorus ಷುರುಮಾಡು.

["Sri Rama's Strength in duty" ಎಂಬ ಹಾಡನ್ನು ಹಾಡುತ್ತಾ ಕಿಟ್ಟಿಯನ್ನು ಎಲ್ಲರೂ ಎಳೆದೊಯ್ಯುವರು. ಕಿಟ್ಟಿಯು ಆ ಹಾಡನ್ನು ಬಾ ಯಿ-ಹಾ ರ್ಮೋ ನಿ ಯ ಮ್ಮ ಲ್ಲಿ ಹಾಡುತ್ತಾ ಅವರೊಂದಿಗೆ ಹೊರಡುವನು]

---

# ದೃಶ್ಯ ೩.

[ದೊಡ್ಡದಾದ ಸೌದೆಯ ಹೊರೆಯೊಂದನ್ನು ತಲೆಯಮೇಲೆ ಹೊತ್ತುಕೊಂಡು ಒಬ್ಬ ಮುದುಕನು ಪ್ರವೇಶಿಸಿ, ಮುಗ್ಗರಿಸುತ್ತಾ ಬೀದಿಯ ಮಧ್ಯದ ವರೆಗೂಬಂದು ಬಲ ಸಾಲದೆ ಹೊರೆಯನ್ನು ಕೆಳಗೆಹಾಕಿ ಅದರಮೇಲೆಯೆ ಊರಿಕೊಂಡು ಸುಧಾರಿಸಿಕೊಳ್ಳುತ್ತಿರುವನು. ದೂರದಲ್ಲಿ ಪೋಲಿಸ್ ಸ್ಟೇಷನ್ನಿನಲ್ಲಿ ಎಂಟುಗಂಟೆ ಹೊಡೆಯುವುದು ಕೇಳಿಬರುವುದು. ಕಡೆಯ ಗಂಟೆಯಾಗುವುದಕ್ಕೆ ಸರಿಯಾಗಿ ಅವಸರದಿಂದ ಕಿಟ್ಟಿಯು ಪ್ರವೇಶಿಸುವನು.]

**ಕಿಟ್ಟಿ —** ತಕೋ! ಶನಿ! ಇಲ್ಲೇ ಎಂಟಾಗ್‌ಹೋಯ್ತು. ಇನ್ನು ಡ್ರಿಲ್ಲಿಗೆ ಹೋಗೋಷ್ಟರಲ್ಲಿ ಬಲು lateoo (ಸೌದೆಯ ಹೊರೆ ಮೇಲೂರಿಕೊಂಡಿರುವ ಮುದುಕನ ಮೇಲೆ ಬೀಳುವಂತೆ ನಟಿಸಿ) ಏನಯ್ಯಾ ಇದು ?— ಇದೇನು ಜನಗ್ಳು ಹೋಗೋ ರಸ್ತೇನೋ . ನಿಮ್ಮನೇ ಜಗ್ಲೀನೋ ?..... ಸರ್ಕಾರ ರಸ್ತೇನ ಸೌದೆಮುಂಡಿ ಮಾಡ್ಕೊಂಡು ಕೂತುಬಿಟ್ರಿ ನೀನು .....ಸಂಚಾರಮಾಡೋದು ಹ್ಯಾಗಯ್ಯಾ ಜನಗ್ಳು ?......

**ಮುದುಕ —** ಇಲ್ಲಾ..................ದೂರ್ದಿಂದ ಒತ್ಕೊಂಬಂದಿದ್ದೆ ಸೌದೇನ.....ದಣದ್ಬುಟ್ಟೀ ಒುದ್ದಿ .....ಕಟ್ಟೆಳ್ಸಿ ಸುದಾರ್ಸಿಕೊಳ್ತಿದ್ದೆ.

**ಕಿಟ್ಟಿ —** (ಮುದುಕನನ್ನು ಆಪಾದಮಸ್ತಕವೂ ದುರದುರ ನೋಡುತ್ತಾ) ಅಲ್ಕಣಯ್ಯ ?......ಒಳ್ಳೇ ಜಾಡ್ರುಹುಳದ ಹಾಗೆ ಮೈ ಇಟ್ಕೊಂಡು...... ಇಷ್ಟು ದೊಡ್ಕಟ್ ಸೌದೇನ ಎಷ್ಟುದೂರ ಹೊರ್ತೀಯ ?......

‡

**ಮುದುಕ —** (ಬೀದಿಯ ಕೊನೆಯನ್ನು ತೋರಿಸುತ್ತಾ) ಆ ಕೊನೇಲಿರೋ ಸೌದೆ ಮಂಡೀಲಿ ಇದನ್ನಾಕ್ಬಿಟ್ಟು. (ಬೀದಿಯ ಮತ್ತೊಂದು ಕೊನೆಯನ್ನು ತೋರಿಸಿ). ಆ ಅಸ್ಪತ್ರಕಟ್ಟೀ ಮೇಲೆ ಇನ್ನೊಂದು ಕಟ್ ಇಳ್ಸಿ. ಅದ್ನೂನೇ ತಂದ್ ಮಂಡೀಗೆ ಸೇರ್ಸಿದ್ರೇನೆ. ನಮ್ಮನೇಲಿ ಇಟ್ಟು ಎಲ್ರಿಗೂನು ಇವತ್ತು!

**ಕಿಟ್ಟಿ —** ಈವತ್ತಿನ ಹಿಟ್ಟೆಲ್ಲ.... ನೆನ್ನೇ ಹಿಟ್ಟು?... ಮತ್ತೆ ನಾಳೆ ಹಿಟ್ಟು?.

**ಮುದುಕ —** ಇಂಗೇನೆ ನನ್ನೊಡೆಯಾ! ನಮ್ಮಳ್ಳೀಲ್ ಕಟ್ಗೆ ಒಡ್‌ದಿಟ್ಕೊಂಡು. ಜಿಣಾ ಎರಡ್‌ಕಟ್ಟು... ಮಂಡೀ ಸೇರ್ಸಿ ದ್ರೇನೆ .. ನನ್ನೆಂಡರ್ಗೂ ಐಕಳ್ಗೂ ಒಟ್ಟೆ ತುಂಬೋದು.... ನನ್ನೊಡ್ಯಾ.. ..

**ಕಿಟ್ಟಿ —** (ಕಟ್ಟನ್ನೆತ್ತಿ ನೋಡುತ್ತಾ) ಅಲ್ಕಣಯ್ಯಾ.. ಇಂಥಾ ಕಟ್ನೆಲ್ಲಾ ಎಡ್ಡೆಡ್ಡು ನಿಂ ಹಳ್ಳಿಯಿಂದ ದಿನಾ ಹೊತ್ಕೊಂಡ್ ಬರ್‍ತಿದ್ರೆ ಇನ್ನೆಷ್ಟು ದಿನಕ್ಕಯ್ಯಾ ತಡೆಯೋದು.. ನಿನ್ನೀ ಕೈಗಳೂ ಕಾಲುಗ್ಳೂ.. ಒಳ್ಳೇ ಹಂಚಿಕಡ್ಡಿ ಜೋಡ್‌ಸಿದ್ ಹಾಗಿದೆಯಲ್ಲಾ ನಿನ್ ಜಿಸ್ಮು! ಇಷ್ಟು ಮುದ್ಕಾ ನೀನು ... ಏನು ಸುಮಾರು ಎಡ್ಡ್ ಸಾವಿರ ವಯಸ್ಸಿರಬಹುದು ನೋಡಿದ್ರೆ! ಕೆಲ್ಸ ಮಾಡೋಕೆ ಗಂಡು ಮಕ್ಳಿಲ್ವೇ ನಿನ್ಗೇ?

**ಮುದುಕ —** (ಒಣಗಿದ ಸ್ವರದಿಂದ) ಇದ್ರೂ ಬುದ್ದಿ .. .... ಮೂರುಜನ ಪಾಯ್ದ್ರೋರು ..ಒಬ್ ದೊಡ್ಮಳಿಯನೂ ಇದ್ದ.....ಒಂದು ವಾರ್ದಲ್ಲಿ ನಾಕ್ ಜನಾನ್ನು ಕಳ್ಕೊಂಡೇ ಬುದ್ದಿ .....ದೊಡ್ಮಾರಿ ಬಾಯಿಗೆ ತುತ್ತಿಟ್ಟು...

**ಕಿಟ್ಟಿ —** (ಅಣಕಿಸುವುದನ್ನು ಬಿಟ್ಟು) ನಾಕು ಜನಾನು! ಒಂದು ವಾರ್ದಲ್ಲೀ!...... ಮಾರೀ ಬಾಯಿಗೆ ತುತ್ತಿಟ್ಟು! ಯಾವ ಮಾರೀ ಗಯ್ಯಾ?

**ಮುದುಕ —** ಯಾವ್ದೇನು ಬುದ್ದಿ!?... ಬಂದಿರಲಿಲ್ವಾ..... ಆ ದೊಡ್‌ಜರ.....ಒಂದುಮನೆ ಬಿಡ್ದೆ ಕಣ್ಣಿದಿರ್ಗೆ ನುಂಗ್‌ಕೊಂಡೋ ಯ್ತಲ್ಲಾ.....ಮಕ್ಕಳೂ ಮರೀ ಸೊವೆ......... ಮಕ್ಳೂ ......ಓದ್ರು ನನ್ನಳಿಯಾನೂ ಓದ.... 'ನನ್ ಸೊಸೆಗ್ಳೂ.. ನನ್ನ ಮಗ್ಳೂ.... ಅವರ ಐಕ್ಳೂ ಎಲ್ಲರ್ಗೂ....ನಾನ್ ದುಡ್ದ್ ಆಕ್ಸ್ತೀನೆ ಒಟ್ಟೆ ತುಂಬೋದು ..

[ಕಿಟ್ಟಿಯೂ ತನ್ನ ಮನೆಯಲ್ಲಿ ಇನ್ಫ್ಲುಯೆಂಜಾ ಸಾವುಗಳನ್ನು ನೆನೆಸಿಕೊಂಡು ಅಳುವುದಕ್ಕೆ ತೊಡಗುವಂತೆಯೇ ಇರುವನು.]

**ಮುದುಕ —** (ಕಣ್ಣೀರೊರೆಸಿಕೊಳ್ಳುತ್ತಾ) ಸೀ ವೆ ಲ್ಲ ದ್ರಿ ೀ ಬುದ್ದೀ ಒಂದೊಂದ್ ಮನೇನೂ ನಮ್ದೇಶದಲ್ ಆ ಮಾರೀಗ್ ಬಲಿ ಕೊಡ್ತಿದ್ದಾಗ?.... ಅದೆಂತಾದ್ದು "ಇಂಫ್ಲೂನ್ಸಾ"ಂತ ಆಸ್ಪತ್ರೇಲಿಸರಿಟ್ರು ಅದಕ್ಕೆ! ಒಂದ್ ಮನೇ ಬಿಡ್ಗೇ? ..

**ಕಿಟ್ಟಿ —** (ಮುಂದೆ ಕೇಳುವದಕ್ಕಾಗದೇ ಕಿವಿಗಳನ್ನು ಮುಚ್ಚಿಕೊಂಡು) ಸಾಕೋ!..... ಸಾಕೋ!!.... ಸಾಕೋ!!!.... (ಗಂಭೀರವಾಗಿ) ಅಲ್ಲಿರೋ ಕಟ್ನ ಇಲ್ಲಿ ಎತ್ಕೊಂಬಾ.. ಅಷ್ಟ್ ಹೊತ್ಗೆ ..... ಇದ್ನಂಗಡೀಗ್ಸೇರಿಸ್‌ಬಿಟ್ ಬರ್ತೀನೆ...... .

[ಸುಲಭವಾಗಿ ಹೊರೆಯನ್ನು ಹೆಗಲಿಗೇರಿಸಿಕೊಳ್ಳುವನು]

**ಮುದುಕ —** ಅಯ್ಯಯ್ಯೋ ಬುದ್ದಿ! ನೀವ್‌ಯಾಕ್.....

**ಕಿಟ್ಟಿ —** (ಸೈರಿಸದೆ) ಹೇಳಿದ್ದ್ ಕೇಳಯ್ಯ..........ಥ್ಫುತ್!

[ ಹೊರಡುವನು. ಮುದುಕನು ಮತ್ತೊಂದು ಕಡೆ ಹೊರಟು ಇನ್ನೊಂದು ಹೊರೆಯನ್ನು ಹೊತ್ತುಕೊಂಡು ಬರುವನು. ಕಿಟ್ಟಿಯು ಸಡಗರದಿಂದ ಪುನಃ ಬಂದು ಹೊರೆಯನ್ನು ಹೊತ್ತು ಕೊಳ್ಳುವನು ]

**ಕಿಟ್ಟಿ** — ಅಯ್ಯಾ ಇಲ್ನೋಡು .. (ಬೀದಿಯ ಒಂದು ಕೊನೆ ತೋರಿಸುತ್ತಾ) ಇಲ್ನೋಡು ... ಬೀದಿ ಕೊನೇಲಾದೀಪ ಕಾಣ್ಸತ್ತೆ ನೋಡು ....ಮುನ್ಸಿಪಲ್ ದೀಪ .. ಆ ಕಂಬದ ಮನೆ !....

**ಮುದುಕ** — ಆ ಸರ್ಕಾರಿ ಕಂಬಾನೆ.....ಹೂಂ.

**ಕಿಟ್ಟಿ** — ಹೂಂ ಅಲ್ಲಿಟ್‌ಬಿಡು ದಿನಾ ನಿನ್ನೆರಡುಕಟ್ಟುಗ್ಳನ! ನಾನ್ ಮಂಡೀಲ್ ಹಾಕ್‌ಬಿಟ್ ಹೋಗ್ತೀನೆ.... ನೀನು ಮೆಲ್ಲಗ್ ನಡದ್‌ಬಂದು ಮಂಡೀಲ್ ದುಡ್ಡಿಸ್ಕೋ ....ಆ ! ?

**ಮುದುಕ** — ಹಯ್ಯಯ್ಯೋ ನನ್ನಾಡು ಕಟ್ಕೊಂಡು ನಿನ್ಗೇನ್ ಬುದ್ದಿ?

**ಕಿಟ್ಟಿ** — (ಮುದುಕನ ಮಾತಿಗವಕಾಶವನ್ನು ಕೊಡದೆ) ನಿನ್ನ ಯಾರಯ್ಯಾ ಕೇಳೂಂದ್ದದ್ದೆಲ್ಲಾ ? ...ದಿನಾ ಹೀಗೇನಾದ್ರೂ ಮಾಡದಿದ್ದರೆ (ರೆಟ್ಟೆಗಳನ್ನು ತೋರಿಸುತ್ತಾ) ನನಗ್ ತಾಖತ್‌ಕಮ್ಮಿ ಆಗುತ್ತೆ ....ನಿಂ ಹಳ್ಳಿ ಯಾವ್ದು ? ಎಷ್ಟುದೂರ ಇಲ್ಲಿಂದ ?

**ಮುದುಕ** — ಕುರುಬಾರಳ್ಳಿ ಬುದ್ಧಿ . ....ಆದಾರ್ ಆದಾರ್‌ರಿ ಎಡ್‌ನೇ ಕಲ್ಲು ಈ ರಸ್ತೇಲೇ ...

**ಕಿಟ್ಟಿ** — ಇನ್ನು ನನಗ್ಗೊತ್ತಾಯ್ತು ! ನಾನು ಹೇಳಿದ್ದಾಗೆ ಕಟ್ಟುಗಳ್ ತಂದು ಮನೇ ಮುಂದೆ ಇಳಿಸಿಬಿಡು ....ಇನ್ಸ್‌ಬರೋ ಭಾನ್ವಾರ ನಿಂ ಹಳ್ಳೀಗ್‌ಬಂದು......ಈ ಒಣಕಲ್ ರೆಟ್ಟೆಗಳ್

ಇಟ್ಕೊಂಡು ಹೇಗ್ತಾನೇ ಸೌದೆ ಒಡೀತೀಯಾ .. ಅದ್ಕೊ ನೋಡಿ ಬಿಡ್ತೇನೆ.

[ ಓಡುತ್ತಾ ಹೊರಡುವನು ]

**ಮುದುಕ —** ಇದೇನುಚ್ಚೊ ಕಾಣೆ! (ಕಣ್ಣೀರೊರೆಸಿಕೊಳ್ಳುತ್ತಾ ಓಡಿದ ಕಿಟ್ಟಿಯನ್ನು ನೋಡಿ) ಮಿಕ್ಕವ್ರು ಬದ್ಕಿರೋ ಮಕ್ಕೆಲ್ಲಾ .. ಇವಯ್ಯನಂಗ್ಲಾನ ಇದ್ದು ಬಿಟ್ರೆ ನನ್ನಂತಾವ್ರು ಮಕ್ಕಳ್ನ ಕಳ್ಕಂಡದ್ದೂ ಮರೆತ್ ಬಿಡಬೈದು ನೋಡಿದ್ರೆ ನಮ್ಮಯ್ಯ ಎದುರಿಗ್ ನಿಂತಂಗೈತೆ! ಯಾರುಡುಗ್ನೋ ಕಾಣೆ ಯಾರಾದ್ರೇನು .. ಇವ್ನೆತ್ತೋರ್ ಒಟ್ಟೆ ತಣ್ಗಿರ್ಲಿ .

[ನಿಟ್ಟುಸಿರು ಬಿಡುತ್ತಾ ನಿಧಾನವಾಗಿ ಹೊರಡುವನು.]

[ ಪರದೆ ಬೀಳುವುದು ]

---

# ದೃಶ್ಯ ೪.

[ಬಲು ವೇಗವಾಗಿ ಸೈಕಲ್ ಸವಾರಿಯನ್ನು ಮಾಡುತ್ತಾ ಒಬ್ಬನು ತನ್ನ ಬೈಸಿಕಲ್ಲಿನ ಸ್ವಾಧೀನನಾಗಿ ಬರುತ್ತಿರುವನು. ಆ ಸಮಯಕ್ಕೆ ಸರಿಯಾಗಿ ಅವಸಿಗಪ್ಪಲಾಗಿ ಒಬ್ಬಾಕೆಯು ಒಂದು ಕೂಸಿನೊಡನೆ ಬಂದು ಪ್ರಜ್ಞೆತಪ್ಪಿ ಕಿರಿಚುತ್ತಾ ಕೂಸನ್ನು ಬೈಸಿಕಲ್ಲಿನ ದಾರಿಗೆದುರಾಗಿ ಕೆಳಗೆ ಬಿಟ್ಟುಬಿಡುವಳು. ಕಿಟ್ಟಿಯು ಅತಿವೇಗವಾಗಿ ಪ್ರವೇಶಿಸಿ ಮಗುವಿಗೂ, ಬೈಸಿಕಲ್ಲಿಗೂ ಮಧ್ಯೆ ಬೀಳುವನು. ಬೈಸಿಕಲ್ ಅವನ ಬೆನ್ನಿನ ಮೇಲೆ ಹೊರಡುತ್ತಿರುವಲ್ಲಿ ಕಿಟ್ಟಿಯು ಎದ್ದು ಬೈಸಿಕಲ್ಲನ್ನೂ ಸವಾರನನ್ನೂ ನೆಲಕ್ಕೆ ತಳ್ಳುವನು. ಆಮೇಲೆ ಕೆಸರು ಮಣ್ಣು ಸಹಿತವಾಗಿಯೇ ಎದ್ದು ಕೂಸನ್ನು ಎತ್ತಿ ಅದರ ತಾಯಿಗೆ ಕೊಟ್ಟು ಆ ಬೈಸಿಕಲ್ ಸವಾರನನ್ನು ಬಲವಾಗಿ ಹಿಡಿದೊದರುತ್ತ....]

**ಕಿಟ್ಟಿ** — ಏಳೋ ಲೇ! ಕಂಸಾವ್ತಾರ..... ಅಲ್ಲ.....ಶಕಟಾಸುರ! (ಅವನ ಪರಟು ಕಾಲರನ್ನು ಹಿಡಿದೆಳೆಯುತ್ತಾ) ಅಲ್ಕಣಯ್ಯಾ ಬೀದೀಲಿ ಹೋಗೋರ್ ಬೆನ್‌ಮುರಿಯೋಕೇನ್ ಹತ್ತ್ಕೋದ್ ನೀನ್ ಬೈಸಿಕಲ್ನ? ...... ಇದೇನ್ ರಸ್ತೇನೋ ...... ಇಲ್ಲ ನಿಮ್ತಾತನ್ಮನೆ ಹಜಾರ್ವೋ?

**ಬೈಸಿಕಲ್ ಸವಾರ** — ಅಲ್ಕಣ್ರಿ ...... ನಾನು ಲೆಫ್ಟ್‌ಸೈಡ್ (Left Side) ಆಗಿ ಬರುತಿದ್ದದ್ದು..... ಬೆಲ್ಲೂ ಕೂಡ ಹೊಡ್ದೆ......

**ಕಿಟ್ಟಿ** — ಓಹೋ.....ಶಿಶುಗಳ್ನ ಬಲಿ ಕೊಡೋಕ್ ಮುಂಚೆ ಬೆಲ್ಲ್ ಬೇರೆ ಹೊಡೆಯೋದ್ ಇಟ್ಕೊಂಡಿದೀಯಾ! ಘಂಟಾ ಪೂಜಾ? ಇನ್ನ್ ಕರ್ಪೂರಾ.....‌.....ಮಂಗ್ಳಾರ್ತಿ?............ಬಲಿ ಆದ್ಮೇಲೇನೋ! ಸ್ವಲ್ಪಿರು......ಇಲ್ಲ್ ವಿಚಾರಿಸ್ಬಿಟ್ಟು......ನಿನಗೆ ಪ್ರಸಾದ .....ವರಗ್ಳು ಎಲ್ಲಾ ಕೊಡ್ತೇನೆ...........ನಾಟಕದ್ಲಲ್ಲಿ ಕಾಳ್ತಾದೇವಿ.........

ನರಮಾಂಸಾನ ನುಂಗ್ಬಿಟ್ ಹೇಳೋಃಹಾಗೆ.....‘ ವತ್ಸನೇ ! ನಿನಗೆ ಬೇಕಾದ ವರಗಳನ್ನು ಬೇಡಿಕೋ..... ...ನಿನ್ನ ಇಷ್ಟಾರ್ಥಗಳನ್ನು ನೆರವೇರಿಸುವೆನು ’ ....ಸ್ವಲ್ಪಿರು . (ಹೆಂಗಸಿನ ಕಡೆ ತಿರುಗಿ) ಅಮ್ಮಾ ಲೆಫ್ಟ್ಸೈಡೂ ಅಂದರೆ ಗೊತ್ತೇ ನಿನ್ಗೇ ? ಬೈಸ್ಕಲ್ ಹತ್ತ್ಕೊಂಡೋವ್ರು .....ಮೂತೀ ವರ್ಸ್ಕಾನು ಹೊಡ್ಕೊಂಡುಬಂದುಬಿಟ್ಟು ..ಬೆಲ್ಲು ಹೊಡೆಯುತ್ತಿದ್ದನೂವೆ . ಎದುರಿಗೆ ಸಿಕ್ದೆ ಆಕಾಶಕ್ಕೆ ಎಗರ್‌ಬೇಕೂಂತ ಗೊತ್ತಿಲ್ವೆಂ ನಿನ್ಗೆ ರೂಲ್ಸು ? (ಸವಾರನ ಕಡೆಗೆ ತಿರುಗಿ) ಅಯ್ಯಾ ! ಬೆಂಗ್ಳೂರ್ನಲ್ಲಿ ಇಂಗ್ಲೀಷ್ ಹೇಳ್ಕೊಟ್‌ಬಿಟ್ಟೆ ಆ ಮೇಲೆ ಹತ್ತು ನಿನ್ನ ಹಾಳ್ ಬೈಸಿಕಲ್ನ

[ಸವಾರನನ್ನು ಬಿಡುವನು]

**ಬೈಸಿಕಲ್ ಸವಾರ** — I am very sorry !

[ಬೈಸಿಕಲ್ಲನ್ನೂ ಟೋಪಿಯನ್ನೂ ಸರಿಪಡಿಸಿಕೊಳ್ಳುವನು]

**ಕಿಟ್ಟಿ** — ನಿನ್ನ ಸಾರಿ (sorry) ಪದಗಳ್ನೆಲ್ಲಾ ನಿನ್ ಸೋದರ್‌ಮಾವ ಸಂಚರಿಸ್ತಿದ್ದ ಅವನ ಮುಂದೆ ಮೊರೆಯಿಡು (ಸುತ್ತಲೂ ನೋಡಿ, ದೂರದಲ್ಲಿ ಕಂಡವನಂತೆ ನಟಿಸುತ್ತಾ) ಪೋಲೀಸ್ . .ಕಾನ್ಸ್ಟೇಬಲ್ . !

**ಬೈಸಿಕಲ್ ಸವಾರ** — My God ! ... ..... ... . .. . ...

[ ಅರಚುತ್ತಾ ಬೈಸಿಕಲ್ಲನ್ನು ತಿರಿಗಿಸಿಕೊಂಡು ಹೊರಡುವನು ]

**ಕಿಟ್ಟಿ** — (ಹೆಂಗಸಿನ ಕಡೆ ತಿರುಗಿ).. ...ಅಮ್ಮಾ ! ಮುಗೂನ್ ಸಾಯಿಸ್ಬೇಕೂ ಅಂದ್ರೆ ಮನೇಲಿ ಭಾವಿಯಿಲ್ವೇ ? ....ಇಷ್ಟು ತಸ್ಕಿ ತಕೊಂಡು ಇಲ್ಲಿಗೆತ್ಕೊಂಡ್ ಬಂದು ಬೀದೀಲಿ ಹೋಗೋ ಬಂಡಿಗಳ

ಮುಂದೆ ಹಾಕಿ . ಇಷ್ಟು ಜನಕ್ಕೆ ತೊಂದರೆ ಬದ್ಲಾಗಿ . ಮನೇ ಭಾವೀಲೇ ದಬ್ ಬಿಟ್ರೆ ಎಲ್ರಿಗೂ ಸಲೀಸು ! .ನಿನ್ನ ಹಾಳ್‌ಮುಗೂನ ಬಚಾಯ್ಸೋ ಗಲಾಟೇಲಿ ನನ್ನನ್ನು ಬಟ್ಟೆಗಳೆಲ್ಲಾ ಕೆಸ್ರು ! ಈ ಹಾಳ್ ಹೆಂಗಸ್ರು ಇರೋ ಕಡೆಯೆಲ್ಲಾ ಗೋಳೇ ! ಇನ್ ಡ್ರಿಲ್ಲಿಗೆ ಲೇಟೂ ಇನ್ನಾ ಹಾಳ್ ಸ್ಕೌಟ್‌ಮಾಸ್ಟರೂ ಲೇಟಾಗ್ ಬಂದೇಂತ ... next rally ಗೆ ಮಿಠಾಯಿ ತಪ್ಪಿಸಿಬಿಡ್ತಾನೋ ಏನೋ ? ! ಏನ್ಗತಿಯೋ ! ?

[ಅವಸರದಿಂದ ಹೊರಡುವನು. ಹೆಂಗಸು ಮಾತನಾಡುವುದಕ್ಕೆ ತೋಚದೆ ಮಗುವನ್ನಪ್ಪಿಕೊಂಡು ನಿಧಾನವಾಗಿ ಹೊರಡುತ್ತಾ ತನ್ನಷ್ಟಕ್ಕೆ ತಾನೇ ಮಾತನಾಡುವಳು]

**ಹೆಂಗಸು —** ನೀನೇನ್ ಬೇಕಾದ್ರೂ ಬೈಕೋ ..ನನ್ರಾಜ ನನ್ನ ಭಾಗಕ್ ದೇವ್ರುಹಾಗ್ ಬಂದು (ಮಗುವನ್ನು ತಬ್ಬಿಕೊಳ್ಳುತ್ತಾ) ನನ್ನ ಕಂದನ್ನ ಕಾಪಾಡಿದ್ಯಲ್ಲ ... ಅಷ್ಟೇ ಸಾಕು (ನಗುವನ್ನು ಸೂಚಿಸುತ್ತಾ) ನನ್ನೇನ್ ಬೇಕಾದ್ರೂ ಅಂದ್ಕೋ ! . ಮಗು !

[ ನಿಧಾನವಾಗಿ ನಿಷ್ಕ್ರಮಿಸುವಳು ]

[ ಪರದೆ ಬೀಳುವುದು ]

---

# ದೃಶ್ಯ ೫.

[ಸ್ಕೌಟು ಪ್ರೈದಾನ-ಸ್ಕೌಟುಗಳಿಗೆ ಸ್ಕೌಟ್‌ಮಾಸ್ಟರು ಡ್ರಿಲ್‌ಮಾಡಿಸುತ್ತಿರುವರು]

**ಸ್ಕೌಟು ಮಾಸ್ಟರ್ —** odd numbers ....two steps to the rear! ....Even numbers.... two steps to the front! One!... Two!.....[ಸ್ಕೌಟುಗಳು ಅನುಸರಿಸುವರು]

**ಕಿಟ್ಟಿ —** (ಆಗ ತಾನೇ ಬಂದು, ಸ್ಕೌಟು ಮಾಸ್ಟರಿನೊಡನೆ ಬಹಳ ದೈನ್ಯದಿಂದ) ಕ್ಷಮಿಸ್ಸಿ ಸಾರ್! ಪರ್ಮಿಷನ್ ಕೊಟ್ರೆ (ಸ್ಕೌಟು ಹಿಂದಳವನ್ನು ತೋರಿಸಿ) ಆ "ಆಡು" ಗಳ ಗುಂಪಿಗೆ ಸೇರ್ಕೊಂಡು ಬಿಡ್ತೀನ್ ಸಾರ್!

**ಸ್ಕೌಟು ಮಾಸ್ಟರ್ —** (ಕನ್ನಡಕಗಳ ಮೂಲಕ ಅವನನ್ನು ನೋಡುತ್ತಾ) ಯಾವ ಆಡುಗ್ಳೋ? ಅಲ್ಲ.... ನೀನು ...

**ಕಿಟ್ಟಿ —** (ಅಡ್ಡಮಾತಾಗಿ) ಅಲ್ಲಿ . . ಹಿಂದೆ ನಿಂತಿರೋ "ಆಡು"ಗ್ಳು ಸಾರ್ ....ನೆನ್ನೆ ಹೇಳಿದ್ರಲ್ಲ ಸಾರ್, ನೀವೇ! ಒಂದು, ಮೂರು, ಐದು, ಏಳು ಇತ್ಯಾದಿಗಳೆಲ್ಲಾ "ಆಡು"ಗ್ಳು!......ಎರಡು, ನಾಲ್ಕು, ಆರು ಇತ್ಯಾದಿಗಳೆಲ್ಲಾ "ಈವನ್ನು"ಗಳು! ಅದೂ ಅಲ್ದೆ "Two Steps to the rear" ...... ಅಂದ್ರೆ "ಎರಡು ಹೆಜ್ಜೆಗಳನ್ನು ಹಿಂದಕ್ಕೆ ಹಾಕಿರಿ" ಅಂತ! ..ನೆನ್ನೆ ಏಳಾಗಿದ್ದೆ ಸ್ಸಾರ್ ...ಆಡುಗಳಲ್ಲಿ ಏಳನೇದು!......ಈ ಹೆಜ್ಜೆಗಳನ್ನ ಹಿಂದೆ ಹಾಕೋದ್ರಲ್ಲಿ ಮೊದಲು ಎಡಗಾಲು ಹಿಂದೆ ಹಾಕಬೇಕಲ್ವೇ ಸಾರ್? (ಮಂಕನಹಾಗೆ ಒದರುತ್ತಾ) ಎಡ ಅಂದರೆ left......

**ಸ್ಕೌಟು ಮಾಸ್ಟರ್ —** ಏನೋ ನಿನ್ನ ಚಾಲಾಕು? ಇಷ್ಟು ಹೊತ್ತು ಬಿಟ್ಕೊಂಡ್ ಬಂದ್ಬಿಟ್ಟು.....ಯಾರ ಹತ್ರಲೋ ಈ ಮಾತು ಬಧಲಾಯ್ತೋ ಚಾಲಾಕು? ..ಎಲ್ಲಿಂದ್ ಧುಮಿಕಿದ್ಯೋ ಈಗ?

**ಕಿಟ್ಟಿ —** ಧುಮ್ಕಿದ್ದೆಲ್ಲಿಂದ ಸಾರ್? .. .....ರಸ್ತೆ ಉದ್ದಕ್ಕೂ ಸರಸರಸರಾಂತ ನಡ್ಕೊಂಬಂದೆ ಸಾರ್

[ಹಿಂದಳದ ಕಡೆ ಹೊರಡುವನು]

**ಸ್ಕೌಟು ಮಾಸ್ಟರ್ —** ಎಷ್ಟುಹೊತ್ತೋ ಬರೋದು ನೀನು?

**ಕಿಟ್ಟಿ —** ಕ್ಷಮ್ಸಿ ಸಾರ್ .ನೀವೇ ನೆನ್ನೆ ಹೇಳಿದ್ರಲ್ಲ ಸಾರ್. ಎಂಟ್‌ಘಂಟೇಗೆಲ್ಲ ...ಇಲ್ಲಿರ್ಬೇಕೂಂತ!

**ಸ್ಕೌಟು ಮಾಸ್ಟರ್ —** ಈಗೆಷ್ಟು ಘಂಟೆ?

**ಕಿಟ್ಟಿ —** ಸ್ವಲ್ಪ ಹಾಗೇಇರಿ ಸಾರ್, ಹೇಳ್ತೀನೆ ಸರಿಯಾಗಿ! (ಸ್ಕೌಟು ಮಾಸ್ಟರ ಕೈಗೆ ಕಟ್ಟಿದ್ದ ಗಡಿಯಾರವನ್ನು ಬಗ್ಗಿ ನೋಡಿ) ಎಂಟ್ ಬಜಾಯ್ಸಿ ಇಪ್ಪತ್ತು ನಿಮ್ಸ್ಸ ಸಾರ್! Correct ಏನ್ಸಾರ್ ಆನ್ಸರೂ? ನೀವೇ ನೋಡಿ ಸಾರ್.

**ಸ್ಕೌಟು ಮಾಸ್ಟರ್ —** ಅಲ್ಕಣೋ ಯಾಕಿಷ್ಟು ಲೇಟೋ ಅಂದ್ರೇ?

**ಕಿಟ್ಟಿ —** ಬರೋಸ್ತರಲ್ಲೆ ಟೈಮಾಗಿ ಹೋಯ್ತು ಸಾರ್.... ಕ್ಷಮ್ಸಿ ಸಾರ್!

**ಸ್ಕೌಟು ಮಾಸ್ಟರ್ —** ಅದೇನೋ ನಾನು ಕೇಳಿದ್ದು, ಯಾಕಿಷ್ಟು ಟೈಮಾಯ್ತೂಂತ?

**ಕಿಟ್ಟಿ** — ಟೈಮಾಗ್ಹೋಯ್ತು ಸಾರ್ ಅಲ್ಲ ಬರೋಷ್ಟ್ಹೊತ್ತಿಗೆ ಬರ್ಲಿಲ್ಲ ಸಾರ್ ನಾನು ; ಹ್ಯಾಗೆ ಬೇಕಾದ್ರೂ ಇಟ್ಕೊಳ್ಳಿ ಸಾರ್ ! ಸತ್ಯಸಾರ್ ! ಸುಳ್ಳು ಹೇಳ್ಬಾಕಾದ್ರೇನ್ಸಾರ್ ...... ಪೇರಿಸಿ ಬಿಟ್ಟೇನು ಪರ್ವತದ್ಹಾಗೆ ಆಪದ್ಧಗ್ಳು ?

**ಸ್ಕ್ಯಾಟು ಮಾಸ್ಟರ್** — ಎಂಟ್ ಘಂಟೇಗೆಲ್ಲ ಇಲ್ಲಿ ಹಾಜರಾಗಿ ಇರೋಕೇನೋ ಕೇಡು ? ಹೇಳೋ ನಿಜ !

**ಕಿಟ್ಟಿ** — (ಆತ್ಮಗತಂ) ಸರಿ ! ಇವ್ರು ನಿಜ ನಂಬೋ ಹಾಗಿಲ್ಲ ಇನ್ನಪದ್ಧಕ್ಕೆ ಅಷ್ಟೇನೆ (ಸ್ಕ್ಯಾಟ್ ಮಾಸ್ಟರೊಡನೆ ಗಟ್ಟಿಯಾಗಿ ಪಶ್ಚಾತ್ತಾಪದಿಂದ) ಮನೇ ಗಡಿಯಾರ ಜಪಾನೀಸ್ ಕ್ಲಾಕ್ ಸಾರ್ ; ಬೆಳಿಗ್ಗೆ ಕಣ್ಬಿಟ್ಟ್ ಕಾಫೀಂತ್ ಕಿರ್ಚೋದ್ರಲ್ಲಿ . ಎಂಟ್ ಘಂಟೆ ಹೊಡದ್ಬಿಡುತ್ತೆ ಸಾರ್ ಶನಿ !

**ಸ್ಕ್ಯಾಟು ಮಾಸ್ಟರ್** — ಹಾಗಾರಾರ್ಘಂಟೇಗೇ ಏಳ್ಬೇಕು.

**ಕಿಟ್ಟಿ** — (ಬೆ ಪ್ಪಾ ದ ನ ಗು ವಿ ನಿಂ ದ) ಕ್ಷಮಿಸ್ಸಿ ಸಾರ್ !

**ಸ್ಕ್ಯಾಟು ಮಾಸ್ಟರ್** — (ಶೋಚದ) ಯಾಕೋ ?

**ಕಿಟ್ಟಿ** — (ಹಲ್ಲು ಕಿರಿಯುತ್ತಾ) ಹಾಗಂದ್ರೇನ್ ಸಾರ್ ? ಎರಡ್ಘಂಟೇಗೆ ಮೂರ್ರ್ಬೇಕು.... ಮೂರ್ಘಂಟೇಗೆ ನಾಲಕ್ಬೇಕು... ಐದ್ಘಂಟೇಗಾರ್ಬೇಕು.....ಆರ್ಘಂಟೇಗ್ ಏಳ್ಬೇಕೂಂದ್ರೆ ಎಲ್ಲಾಗುತ್ತೆ ......ಸಾರ್..... ಒಂದ್ ಘಂಟೆ ಕಾದಿರ್ಬೇಕಲ್ಲ ಸಾರ್.....ಕ್ಷಮಿಸ್ಸಿ ಸಾರ್ !

**ಸ್ಕ್ಯಾಟು ಮಾಸ್ಟರ್** — ಏನ್ ಕ್ಷಮಿಸ್ಬೇನೋ ? ನೀನೋ ನಿನ್ನ ಅವ್ತಾರವೊ ?

**ಕಿಟ್ಟಿ —** (ತನ್ನನ್ನೇ ನೋಡಿಕೊಳ್ಳುತ್ತ) ಯಾಕ್ ಸಾರ್! ನನ್ನವ್ತಾರಕ್ಕೇನು ಕಮ್ಮಿ ಸಾರ್?... ತಕ್ಕಮ್ಟ್ಟಿಗಿಥೇನಲ್ಲ ಸಾರ್? ಗಂಡ್ಸಿಗೇನ್ಸಾರ್ ಗೈರತ್ತು ..ಗರಜು ಇದ್ರೆ ಸಾಲ್ದೇನ್ ಸಾರ್ ?

**ಸ್ಕೌಟು ಮಾಸ್ಟರ್ —** ಏನೋ ಷರ್ಟಿಲ್ಲಾ ?

**ಕಿಟ್ಟಿ —** ಬರೋ ಆತುರ್ದಲ್ಲಿ ಮುಗ್ಗರಿಸಿಬಿಟ್ಟೆ. ...ಸ್ವಲ್ಪ ಮದರಿಂಡಿಯ (Mother India) ಅಲ್ಲ ಕೆಸ್ರು ಮೆತ್ಕೊಂಡ್ ಬಿಡ್ತೇನೋ! ಷರ್ಟೊಂದ್ ಬಿಟ್ಟು ಮಿಕ್ಕ ವಿಷ್ಯದಲ್ಲೆಲ್ಲಾ ತೃಪ್ತಿಕರವಾಗಿಥೇನ್ಸಾರ್ ತಕ್ಕಮ್ಟ್ಟಿಗೆ

**ಸ್ಕೌಟು ಮಾಸ್ಟರ್ —** ಏ ನ್ ಮಿ ಕ್ಕಿ ಷ್ಯ ದ ಲ್ಲಿ ? ಸಿನ್ ರುಮಾಲೆಲ್ಲೋ?

**ಕಿಟ್ಟಿ —** ಹಸ್ರಾಗಿದ್ರೂನೂವೆ .ಅಂಚುಗ್ಳು ಹಳದಿ, ನಾಳೆ ಹರದ್ಬಿಟ್ಟು ಕಟ್ಕೊಂಬರ್ತೇನೆ ಸಾರ್!

**ಸ್ಕೌಟು ಮಾಸ್ಟರ್ —** ಯಾವ್ದಕ್ಕೋ ಅಂಚು?

**ಕಿಟ್ಟಿ —** ನಮ್ಮನೇಲಿ ಒಂದು ಹಸರು ಸೀರೆ ಅಲ್ಲ ಒಂದು ಉದ್ವಾದ ಬಟ್ಟೆ

**ಸ್ಕೌಟು ಮಾಸ್ಟರ್ —** ಚೆನ್ನಾಗಿಥೆ.. ಒಂದೊಂದು ಕಾಲಿಗೆ ಒಂದೊಂದು ಬಣ್ಣದ ಸಾಕ್ಸು! ..ಲೇಸ್ (Lace) ಇಲ್ಲದ ಬೂಟ್ಸು ...ತಲೇಗೆ ಸೀರೆ .. ಚೆನ್ನಾಗಿಥೆ ನಿನ್ ಯೂನಿಫಾರ್ಮು .(ಷರ್ಟನ್ನು ತೋರಿಸುತ್ತಾ) ಈಗಿರೊ ಷರ್ಟಿಗೆ ಗುಂಡಿಯಾದ್ರೂ ಸರಿಯಾಗಿ ಹಾಕ್ಕೊಡ್ಡೇನೋ?

**ಕಿಟ್ಟಿ —** ಅಯ್ಯಯ್ಯೋ! ಹೌದೆ! ಕ್ಷಮ್ಸಿಸಾರ್ ನಮ್ಮಪ್ಪ ಹೇಳೋಹಾಗೆ...ಆಚಾರ ಕಚೇರಿ ಅರೇಂಜ್ಮೆಂಟಾಗಿದೆ!

**ಸ್ಕೌಟು ಮಾಸ್ಟರ್** — ಅದೇನ ಅರೇಂಜ್ಮೆಂಟೋ ?

**ಕಿಟ್ಟಿ** — ಏನ್ರೇ ಸಾರ್ ! ಗುಂಡಿಗಳಿಗೆಲ್ಲ ಒಳ್ಳೊಳ್ಳೆ ಪ್ರಮೋಷನ್ನುಳು ..ಕಾಜಾಗಳಿಗೆಲ್ಲ . ಪಾಪ ! ರಿಟ್ರೆಂಚ್‌ಮೆಂಟೂ !

**ಸ್ಕೌಟು ಮಾಸ್ಟರ್** — ಸಾಕು ! ಇನ್ಮೇಲಾದ್ರೂ ಲೇಟಾಗಿ ಬರ್ಬೇಡ ! ಸೇರ್ಕೊ. ... .... ನೀನ 'ಆಡುಗ್ಳೊ'ಂದ್ಯಲ್ಲ .... .....ಅವುಗಳ ಜೊತೇಲಿ !

[ಕಿಟ್ಟಿಯು ಹೋಗಿ ದಳದಹಿಂದಿನ ಸಾಲನ್ನು ಸೇರಿಕೊಳ್ಳುವನು]

**ಸ್ಕೌಟು ಮಾಸ್ಟರ್** — ರೈಟ್‌ಟರ್ನ್ !

**ಕಿಟ್ಟಿ** — (ಸಾಲಿನಲ್ಲಿದ್ದವರು ತಿರುಗುತ್ತಿರಲು ತನ್ನಲ್ಲಿಯೇ) ರೈಟ್ ಬಲ ಟರ್ನ್ . .ತಿರುಗು . [ನಿಧಾನವಾಗಿ ತಿರುಗುವನು]

**ಸ್ಕೌಟು ಮಾಸ್ಟರ್** — ಎಷ್ಟು ಹೊತ್ತೊ ತಿರ್ಗೋಕೆ ?

**ಕಿಟ್ಟಿ** — ತರ್ಜುಮೆ ಮಾಡೋ ತಕ್ರಾರಿನಲ್ಲಿ ದೇರಿ ಆಗ್ಹೋಗತ್ತೆ ಸಾರ್ .....ಕನ್ನಡದಲ್ಲೆ ಮಾಡ್ಬಿ ಸಾರ್ ಆಗ ತೋರಿಸ್ತೇನೆ !

**ಸ್ಕೌಟು ಮಾಸ್ಟರ್** — (ಆತ್ಮಗತಂ) ಈ ಶುಂಠನ್ನ ಸ್ಕೌಟಾಗಿ ಹ್ಯಾಗ್ಮಾನೇ ಮಾಡೋದೋ ಕಾಣೆ .... (ದಳದವರನ್ನು ಕುರಿತು) As you were !

[ದಳದವರು ಮೊದಲಿದ್ದಂತೆ ತಿರುಗುವರು]

**ಕಿಟ್ಟಿ** — (ನೆರೆಯುವಸಾದ ಮಗುವನ್ನು ಕುರಿತು) ಲೇ !...... ಗುಬ್ಬಚ್ಚಿ ! ನೋಡ್‌ದೇನೋ ನಿನ್ಕೆಲ್ಸ ! ಅzಾದಾಗಿ ತಿರುಗ್ಬಿಡ್ಡೋನ್ನ ....ಮೆಲ್ಲಗ್ ಕಾರ್ಡ್ನಲ್ಲಕ್ಕಿ ಕೊಟ್ಟು..... ಗಿಲೀಟ್‌ಮಾಡಿ .....

ಕರ್ಕೊರ್ಂಡ್ ಬಂದು.....ಸೇರಿಸಿಬಿಟ್ಟೆಲ್ಲ ಈ ಶುಕ್ರಾಚಾರಿ ಸೈನ್ಯಕ್ಕೆ! ಇದೇನೇನೋ ನೀನು ಮಿಠಾಯಿಗಿಠಾಯಿ ಅಂದದ್ದು?... .... ಈ ಡ್ರಿಲ್ಲಾಗ್ಲಿ . ತೋರಿಸ್ತೇನೆ ...ನಿನ್ಗೆ ಯಾವತ್ತು ಹುಟ್ಟಿದ್ಹಬ್ಬ?

**ಮಗೂ —** (ಗಾಬರಿಯಿಂದ) ನ ... ನ... ಗ್ಗೊ ... ತ್ತಿ...... ಲ್ಲ... ಕಾ.... ಣೋ ..

**ಕಿಟ್ಟಿ — ನನಗ್ಗೊತ್ತು...... ಇವತ್ತು** ಈ ಡ್ರಿಲ್ಲಾಗ್ಲಿ... .... ಮಾಡ್ತೇನೆ ಹಬ್ಬ!

**ಮಗೂ —** (ನೆರೆಯವನೊಡನೆ) ಅಪ್ಪು! ಲೇ! ದಮ್ಮಯ್ಯ ಕಣೋ!.... ಇಲ್ಲಿ ಬಂದ್ಬಿಡೋ....

[ಅಪ್ಪು ತನ್ನ ಸ್ಥಾನ ಬಿಟ್ಟು ಬರುವನು]

**ಕಿಟ್ಟಿ —** ಒಹೋಹೋ! ಅಲ್ಲಿ ಹೋದ್ರೇನ್ ತಪ್ಪಿಸ್ಕೊಂಡ್ ಬಿಟ್ಟೇಂತ ತಿಳ್ಕೊಂಡ್ಯ....?

**ಮಗೂ —** ಅಲ್ಲ ಕಣೊ.... ಇಲ್ಲಿಂದ ಎಸ್ಸೆಮ್ಮಿನ (S. M.) ಮುಖ ಚನ್ನಾಗಿ ಕಾಣುತ್ತೆ.

**ಕಿಟ್ಟಿ —** ಹೂಂ .. ಗುರುದರ್ಶನ ಚನ್ನಾಗಿ ಮಾಡ್ಕೊ'.. ಅವರ್ ಹತ್ರ ಬರೊವಾಗ "ಮನೇಗೆ ಹೋಗಿ ಸೇರೋ ಹೊತ್ತಿಗೆ ....ನನ್ಕೈಲಿ..... ಕೈಗ್ಳು ಜೋಪಾನವಾಗಿರ್ಲಿ"ಂತ್ಲೂ ಆಶೀರ್ವಾದ ಮಾಡಸ್ಕೋ....

**ಸ್ಕೌಟು ಮಾಸ್ಟರ್ —** (ದಳದ ಮೊದಲನೆಯವನೊಡನೆ) ನಿನ್ ಗುಡ್ ಟರ್ನ್ ಏನೋ ಇವತ್ತು?

**೧ ನೇ ಸ್ಕೌಟು** — ನಮ್ಮ ಮುದರ್ಗೆ ಕಾಯ್ಲೆ ಆಗಿತ್ತು ..... ಆಸ್ಪತ್ರೆಯಿಂದ ಔಷಧಿ ತಂದೆ ಸಾರ್.

**ಸ್ಕೌಟು ಮಾಸ್ಟರ್** — GOOD! (ಎರಡನೆಯುವನೊಡನೆ) ನಿನ್ದು ?

**೨ ನೇ ಸ್ಕೌಟು** — ನನ್ನ ತಮ್ಮನ್ಗೆ ಹೋಂವರ್ಕ್ ಹೇಳ್ಕೊಟ್ಟೆ ಸಾರ್ !

**ಸ್ಕೌಟು ಮಾಸ್ಟರ್** — GOOD!

[ಹೀಗೆಯೆ ಪ್ರತಿಯೊಬ್ಬರನ್ನೂ ಕೇಳುತ್ತ ಬರೆದುಕೊಳ್ಳುತ್ತ ಇರುವನು]

**ಕಿಟ್ಟಿ** — (ನೆರೆಯುವರೊಡನೆ) ಇದೇನೋ ಈ ಗುಡ್ ಟರ್ನುಗಳ ಬಾಬ್ತು ಈವತ್ತು ? ಏನೋ ಅದು ಗುಡ್‌ಟರ್ನು ಅಂದ್ರೆ?

**ಅಪ್ಪೂ** — ಅದೇ ಒಬ್ಬೊಬ್ರು ಹೇಳ್ತಿದ್ದಾರಲ್ಲೋ ! ಕಾಯಿಲೆಯಾದ ಮುದರ್ಗೆ ಔಷಧಿ ತರೋದು ...ತಮ್ಮನಿಗೆ ಹೋಂವರ್ಕ್ ಹೇಳಿಕೊಡೋದು.....ಹೀಗೆ... .

**ಕಿಟ್ಟಿ** — ಹಾಗಾದರೆ ನಿಮ್ಮಮ್ಮನಿಗೆ ಜ್ವರಾನೇ ?

**ಅಪ್ಪೂ** — ಇಲ್ಲ

**ಕಿಟ್ಟಿ** — ಮತ್ತಿನಿಗೆ ತಮ್ಮನ್ನೂ ಇಲ್ವಲ್ಲೋ ...?

**ಅಪ್ಪೂ** — ಇಲ್ದಿದ್ರೇನೋ ?

**ಕಿಟ್ಟಿ** — ಹಾಗಾದ್ರೆ ಸಿಕ್ಕೊಳ್ತೀಯಲ್ವೇನೋ ?

**ಅಪ್ಪೂ** — ಯಾಕೋ! ನಮ್ಮಪ್ಪಿಗೆ ನ್ಯೂಸ್‌ಪೇಪರ್ ತಂದದ್ದು ಹೇಳ್ಕೋತೇನೆ.

**ಕಿಟ್ಟಿ —** ಅದೂನೂ ಈ ಗುಡ್‌ಟರ್ನ್ಸ್‌ಗಳ ಬಾಬ್ತಿಗೆ ಸೇರಿದ್ದೋ ?

**ಅಪ್ಪೂ —** ಹೂಂ ಕಣೋ !

**ಕಿಟ್ಟಿ —** ಒಳ್ಳೇ ಕಾಟಕ್ಕೆ ತಗಲ್ಕೊಂಡ್ನಲ್ಲಾ ! ನನಗೀ ಮೂರು ಬಾಬತ್ನಲ್ಲೂ ಸೊನ್ನೆ ಕಾಣೋ......

**ಸ್ಕೌಟು ಮಾಸ್ಟರ್ —** (ಅಪ್ಪುವನ್ನು ಕುರಿತು) ನಿನ್ನ ಗುಡ್ ಟರ್ನೇನೋ ?

**ಅಪ್ಪೂ —** ನಂ ಫಾದರ್ಗೆ ನ್ಯೂಸ್ಪೇಪರ್ ತಂದ್ಕೊಟ್ಟೆ ಸಾರ್ !

**ಸ್ಕೌಟು ಮಾಸ್ಟರ್ —** GOOD ! (ಕಿಟ್ಟಿಯನ್ನು ಕುರಿತು) ನಿನ್ದು ?

**ಕಿಟ್ಟಿ —** ಏನೂ.....ಇಲ್ಲ ಸಾರ್ !

**ಸ್ಕೌಟು ಮಾಸ್ಟರ್ —** ಯಾಕಿಲ್ಲ ?

**ಕಿಟ್ಟಿ —** ಆಪರ್ಚುನಿಟೀಸ್ ಇಲ್ಲ ಸಾರ್ ಮನೇಲಿ !

**ಸ್ಕೌಟು ಮಾಸ್ಟರ್ —** ಅದು ಎಕ್ಸ್‌ಕ್ಯೂಸಲ್ಲ.

**ಕಿಟ್ಟಿ —** ಒಳ್ಳೇ ....Excuse ಅಲ್ಲ....ಸಾರ್ !....ನಮ್ಮಮ್ಮ ಸಾರ್....ಕಲ್ಗುಂಡಾಗಿದಾಳೆ ಸಾರ್ ! ಇಸ್ಕೂಳಿಗೆ ಜ್ವರ ಬಂದು.... ನಾನಾಸ್ಪತ್ರೇಗೆ ಹೋಗಿ ಔಷದ ತಂದು....ನಿಮ್ಮ ಗುಡ್‌ಟರ್ನ್ ಪಟ್ಟೀಗೆ ದಾಖಲಾಗೋದು ಯಾವಾಗ಼್ೋ ದೇವ್ರಿಗೇ ಗೊತ್ತು ! ಇಣ ನನ್ತಮ್ಮೋ ಅವನ ಹೋಂವರ್ಕ್ ಅವನೇ ಮಾಡ್ಕೊಂಡ್ಬಿಡ್ತಾನೆ ಸಾರ್ !....ಕ್ಷಮಿಸ್ಸಿ...ಸಾರ್ ನಮ್ದು....Brainy....healthy.... family ಸಾರ್....ಶನಿ !

**ಸ್ಕೂಟು ಮಾಸ್ಟರ್ —** ಇಂಥಾ excuse ನಾಳೀಗಾಗ್ದು.... ಹೊಸದಾಗಿ ಸೇರಿದವ್ರೂಂತ ಬಿಟ್ಬಿಟ್ಟೆಧೇನಿವತ್ತು. [ಹೊರಡುವನು]

**ಕಿಟ್ಟಿ —** ಇದೇನ್ ಹಣೇ ಬರವೋ........ಇನ್ನಾ ರ‍್ಯಾಲಿ ಗೀಲಿಯಾದ್ರೂ ಆಗಾಗ್ಯೆ ಇದ್ರೆ ಮಿಠಾಯಿ ಬಟ್ವಾಡೇ ಗಲಾಟೇಲಿ.... ಮರತ್ಬಿಡಬಹುದು ಈ ತಕ್ರಾರುಗಳ್ನ. ನೆಕ್ಸ್ಟ್ರ್ಯಾಲಿ ಯಾವಾಗ್ಲೋ?

**ಅಪ್ಪೂ —** (ಹೆದರುತ್ತ) ನನಗ್ಗೊತ್ತಿಲ್ಲ ಕಣೋ!

**ಕಿಟ್ಟಿ —** ಮತ್ ಇನ್ಯಾರಿಗ್ಗೊತ್ತು?

**ಅಪ್ಪೂ —** ಎಸ್ಸೆಂಗೆ!

**ಕಿಟ್ಟಿ —** ಕೇಳಿ ಹೇಳ್ತೀಯ?....ಇನ್ನದಾದ್ರೂ ತಿಳದ್ರೆ ಸ್ವಲ್ಪ ಹೋಪ್‌ಫುಲ್‌ಆಗಿ....ತಡ್ಕೋಬಹ್ದು....ಈ ತಸ್ದಿಗಳ್ನ!

**ಅಪ್ಪೂ —** ನಾನ್ಕೇಳಿದ್ರೆ ಕೋಪಿಸಿಕೊಳ್ತಾರೋ!

**ಸ್ಕೂಟು ಮಾಸ್ಟರ್ —** ಡಿಸ್ಮಿಸ್

[ ಎಲ್ಲರೂ ಬೇರೆಬೇರೆಯಾಗುವರು ]

**ಅಪ್ಪೂ —** (ಮೆಲ್ಲಗೆ ಮಗುವಿನೊಡನೆ) ಲೋ ರ‍್ಯಾಲಿ ಯಾವಾಗಾಂತ ಈಗ್ಲೇ ಷುರು ಮಾಡ್ಬಿಟ್ಟೆ ಕೇಳೋಕೆ....ನಾನ್ ಹೋಗ್ತೇನಪ್ಪ.... ನೀನ್ಬೇಕಾದರೆ ಬಾ ಅವನ್ನೂ ಕೇಲಿ!

[ ಅಪ್ಪೂ ಹೊರಡುವನು ]

**ಕಿಟ್ಟಿ — ಲೋ! ಮಗೂ! ಈ ರ‍್ಯಾಲಿ ಅಂಬೋದು** ಯಾವಾಗ್ಲೋ? ಮಿಠಾಯಿ ಗಿಠಾಯಿಯೇನಾದ್ರೂ ಆರ್ಡರ್ ಮಾಡಿಧಾರ್ರ್ಯೋ?

*

**ಮಗೂ —** (ಗಾಬರಿಪಟ್ಟು) ಇನ್ನೂ ಇಲ್ಲಾಂತ ಕಾಣುತ್ತೋ
....ಇಷ್ಟು ಬೇಗ್ಲೆ ಗೊತ್ತಾಗೋದಿಲ್ಲ.

**ಕಿಟ್ಟಿ —** ಮುಮ್ಮೂರ್ತಿನ್ನು ಅಂದ್ಯಲ್ಲ....ಅದಾದ್ರೂ ತಯಾರ್ ಮಾಡ್ತಿಧಾರೇನೋ?

**ಮಗೂ —** (ಆತ್ಮ) ಸರಿ! ಅಪ್ಪೂ ಕಿತ್ತಾಗೆ ಕಂಬಿ ಕೀಳೋಡೆ ಮೇಲು. (ಪ್ರ) ಎಸ್ಸೆಂನ ಕೇಳು....ಎಲ್ಲ ಹೇಳ್ತಾರೆ.

[ ,ಬೇಗ ಬೇಗ ಹೊರಡುವನು ]

**ಕಿಟ್ಟಿ —** (ಸ್ಕೌಟು ಮಾಸ್ಟರಿನೊಡನೆ ಒಬ್ಬನೇ) ಸಾ ರ್?....

**ಸ್ಕೌಟು ಮಾಸ್ಟರ್ —** ಏನೋ?

**ಕಿಟ್ಟಿ —** ಈ....ರ್‍ಯಾಲಿ ಅಂಬೋದ್ಯಾವಾಗ....ಸಾರ್?

**ಸ್ಕೌಟು ಮಾಸ್ಟರು —** ಇನ್ನೂ ಗೊತ್ತಿಲ್ಲ ಕಣೊ!

**ಕಿಟ್ಟಿ —** ಕ್ಷಮ್ಸಿ ಸಾರ್....ನಾಡಿದ್ದು .... ಚಿಕ್ದಾಗೊಂದು.... ರ್‍ಯಾಲಿ ಇಟ್ಕೊಳ್ಳಿ ಸಾರ್?....

**ಸ್ಕೌಟು ಮಾಸ್ಟರ್ —** ಚಿಕ್ದಾಗೊಂದು ರ್‍ಯಾಲಿ! ....ಏನೋ ನೀನ್ ಹೇಳೋದು? ..ನಾಡಿದ್ದು ತಾನೇ ಏನ್ ವಿಶೇಷವೋ?....

**ಕಿಟ್ಟಿ —** ನಮ್ಮನೇಗೆ ಶಾಸ್ತ್ರಿಗಳು ಬಂದಿದ್ರು ಸಾರ್;.... ಬಂದು,.....ನಾಡಿದ್ದು......"ದಿವ್ಯವಾಗಿಧೆ"......ಅದೇನೋ 'ದಿವ್ಯವಾಗಿಧೆ' ಯಂತೆ ಸಾರ್....."ದಿವ್ಯವಾಗಿಧೆ...........ಯಾವ ಕೆಲ್ಸ ಬೇಕಾದ್ರೂ ನಾಡಿದ್ದು ಮಾಡಿದ್ರೆ ಒಳ್ಳೇದೂ" ಅಂತಂದ್ರು ಸಾರ್. ಅದಕ್ಕೇ ನಾನ್ಹೇಳಿದ್ದು ಒಂದು ಚಿಕ್ದೊಂದು ರ್‍ಯಾಲಿ ಇಟ್ಕೋತೀರ ನೀವು... ದಿವ್ಯವಾಗಿಧೆ.....ಲಗ್ನ......ಅಂತ......?

**ಸ್ಕೌಟು ಮಾಸ್ಟರ್ —** ಚಿಕ್ಕ ರ್‍ಯಾಲಿ ಅಂದ್ರೇನೋ ?

**ಕಿಟ್ಟಿ —** ಚಿಕ್ ರ್‍ಯಾಲಿ ಅಂದ್ರೆ (ಯೋಚಿಸುತ್ತಾ) ಮಾರ್ಬಿನ್ನು ಇಲ್ದಿದ್ರೂನೂವೆ......ಒಂದು ಟಿನ್ನು at least ಅರ್ಧ ಟಿನ್ನು ...

**ಸ್ಕೌಟು ಮಾಸ್ಟರ್ —** ಏನು ಹುಚ್ಚ್ಗೋ ನಿನಗೆ ? ರ್‍ಯಾಲಿ ಅಂದ್ರೆ ಟಿನ್ನುಗಳೂಂತೀಯ...............ಲಗ್ನ ಅಂತೀಯ..................ದಿನ ದಿವ್ಯವಾಗಿಧೇಂತೀಯ ....ರ್‍ಯಾಲಿ ಅಂದ್ರೇನೋ ? ನಿನಗೆ ಇಂಗ್ಲೀಷ್ ಗೊತ್ತೆ ?

**ಕಿಟ್ಟಿ —** ಯಾಕೆ ಸಾರ್ ! .ಆರ್ನೇಫಾರಂ ವರೆಗೂ ಮಣ್ಣು ಹಾಕಿಧೇನ್ಸಾರ್ !

**ಸ್ಕೌಟು ಮಾಸ್ಟರ್ —** ಆ ಮೇಲೆ ?

**ಕಿಟ್ಟಿ —** ಮನೇಲಿ ಮ ಣ್ಣಾ ಗ್ಹೋ ಯ್ತು ಸಾರ್...... . ಸರ್ಕಂಸ್ಟೆನ್ಸಸ್ಸೂ.... !

**ಸ್ಕೌಟು ಮಾಸ್ಟರ್ —** ಮತ್ತೆ ರ್‍ಯಾಲಿ ಅಂಬೋದು ಇಂಗ್ಲಿಷ್ ವರ್ಡ್ ಕಾಣೋ ! ಎಲ್ಲಾದ್ರೂ ಓದಿಧೀಯಾ ... ಇಲ್ಲ ಕಿವೀಲಾದ್ರೂ ಕೇಳಿಧೀಯಾ ?

**ಕಿಟ್ಟಿ —** (ಯೋಚಿಸುತ್ತಾ) ರ್‍ಯಾಲಿ?......ರ್‍ಯಾಲಿ? .....ಚೀಫ್ ಸ್ಕೌಟೂ......ಹೈನೆಸ್ ಬರೋದು ! ಎಲ್ಲೋ ಕಿಂಗ್ಸೋ ಕ್ವೀನ್ಸೋ ಬಂದು, ರ್‍ಯಾಲಿ...... (ಮುಖದಲ್ಲಿ ಆನಂದವನ್ನೂ ಪ್ರಕಾಶವನ್ನೂ ತೋರಿಸುತ್ತಾ) ರ್‍ಯಾಲಿ ಗೊತ್ತಾಯ್ತು ಸಾರ್ ! ಸಿಕ್ಸ್ತ್ ಫಾರಂ ಟೆಕ್ಸ್ಟನಲ್ಲಿ ರ್‍ಯಾಲೀಂತ ಬರುತ್ತೆ ! ಸಾರ್ !

**ಸ್ಕೌಟು ಮಾಸ್ಟರ್ —** ಏನೋ ಗೊತ್ತಾಯ್ತು ?

**ಕಿಟ್ಟಿ —** ರ್‍ಯಾಲಿ ಅಂದ್ರೆ ಸಾರ್....ಎಲ್ಲಾ ಸ್ಕೌಟು ಪಟಾಲಂ ಗಳನ್ನೂ ಜಮಾಯ್ಸೋದು! ಚೀಫ್ ಸ್ಕೌಟುಗ್ಳು.................. ಹೈನೆಸ್‌ಗ್ಳು......ಬರ್ತಾರೆ ಆವತ್ತು......ಅವರ್ನ ಮೆಲ್ಲಗೆ ಗಿಲೀಟಾಗಿ ಒಳ್ಳೇ ಕೆಸರಿರೋ ಜಾಗಕ್ಕೆ ಕರಕೊಂಡು ಹೋಗಿ ನಂ ಸ್ಕೌಟು ಗಳ ತಲೇಲಿರೋ ರುಮಾಲುಗಳನ್ನೆಲ್ಲಾ ಕಿತ್ತು ಆ ಕೆಸರ್ಮೇಲೆ ಹಾಸಿಬಿಟ್ಟು ಕೈಮುಕ್ಕೊಂಡ್ ನಿಂತುಕೊಂಡು "ಮಹಾ ಸ್ವಾಮಿ....ತಾವು ದಯವಿಟ್ಟು ನಮ್ಮ ರುಮಾಲುಗಳ್ಮೇಲೆ ನಡೀಲೇ ಬೇಕೂಂ"ತ ಹಟ ಹಿಡಿಯೋದು. ಅದಕ್ಕೆ ಮಹಾಸ್ವಾಮಿಗ್ಳು ...."ಪಾಪ ಬಡ್ಕೋತಾರಲ್ಲಾಂ"ತ ಹಾಗೇ ಮಾಡ್ಬಿಟ್ಟು........ ಮೂಗ್ಮೇಲೆ ಬೆರಳಿಟ್ಕೊಂಡು "ಎಲಾ! .......ನನ್ಮೋಜಾಗೆ ಮಣ್ಮೆತ್ಕೊಳ್ಳದ್ಹಾಗೆ .... ತಲೇಮೇಲಿದ್ದ ರುಮಾಲ್ನ....ಕೆಸರ್ ಮೇಲ್ ಹಾಸಿದ್ರಲ್ಲ....ಇವರು!" ಅಂತ ತಾರೀಫ್ ಪಟ್ಕೊಂಡು.... "ಕೊಡ್ರೋ ಇವ್ರಿಗೆ ಶಾಲುಗಳ್ನ"! ಎಸ್ಸೆಂಗೆ ಶಾಲುಗ್ಳು ಸಾರ್.... "ಕೊಡ್ರೋ ಇವರಿಗೆ ಜೋಡು ಅಲ್ಲ ಶಾಲ್ಜೋಡುಗಳ್ನ; ಸ್ಕೌಟುಗಳ್ಗೆಲ್ಲಾ ದೂದ್ಪೇಡ, ಖಲಾಯಿಸ್ರೋ" ಅಂತ ಖುಷಿ ಪಟ್ಕೊಂಡು ಬ್ರಿಗೇಡ್ಗೆಲ್ಲಾ ಬಕ್ಷೀಸ್ ಬಟ್ವಾಡೇಗೆ ಹುಕುಂ ಕೊಟ್ಬಿಡ್ತಾರೆ....ಅಲ್ವೇ ಸಾರ್?

**ಸ್ಕೌಟು ಮಾಸ್ಟರ್ —** (ಚ ಮ ಕಿ ತ ನಾ ಗಿ) ಯಾರೋ ಹೇಳಿದ್ ನಿನ್ಗೆ. . ನಿನ್‌ಟೆಕ್ಸ್ಟನಲ್ಲೆಲ್ಲೋ ಬರತ್ತಿದೂ?

**ಕಿಟ್ಟಿ —** ಬರ್ದೇ ಏನ್ಸಾರ್? ವಾಲ್ಟರ್ ಅಂಬೋನು........ ಹೀಗೆ ರ್‍ಯಾಲಿ ಮಾಡ್ಬಿಟ್ಟು....Sir ಟೈಟಲ್ಲ ಕಸ್ಕೊಂಬಿಟ್ಟ ಸಾರ್.... ಕಿಂಗ್....ಅಲ್ಲ ಕ್ವೀನ್ ಕೈಯಿಂದ! ಸಾರ್! ಕ್ವೀನೆಲಿಸಬೆತ್ತೂ (Queen Elizabethoo)....ಚೀಫ್ ಗರ್ಲ್‌ಗೈಡೇ ಸಾರ್?!

**ಸ್ಕ್ಯಾಟು ಮಾಸ್ಟರ್ —** ನೀನೋ ನಿನ್ಬುದ್ಧೀನೋ! ........ ಒಳ್ಳೇ ವಿಚಿತ್ರ ಸ್ಕ್ಯಾಟ್ ಬಂದು ಸೇರ್ಕೊಂಡೆ........ನಿನ್ನಿಟ್ಕೊಂಡು ಏನ್ಮಾಡೋದೋ ಕಾಣೆ!

**ಕಿಟ್ಟಿ —** ಕ್ಷಮ್ಸಿ ಸಾರ್, ಏನೋ ಹೀಗಿದ್ರೂನೂವೆ....ಸ್ವಲ್ಪ ತಸ್ದಿ ತಕೊಂಡು ತರ್ಬೇತ್ ಮಾಡಿದ್ರೆ........ಒಳ್ಳೇ ಥೇಟಾಗಿ ತಯಾರಾಗ್ತೇನೆ ಸಾರ್ ರ್‍ಯಾಲಿ ಹೊತ್ತಿಗೆ....ಇನ್ನೂ ಎಷ್ಟ್ ದಿನ ಸಾರ್ ನಾನ್ ಥೇಟಾಗೋಕೆ....ಅಲ್ಲ....ರ್‍ಯಾಲೀಗೆ?

**ಸ್ಕ್ಯಾಟು ಮಾಸ್ಟರ್ —** ಇನ್ನೂ ಮೂರು ತಿಂಗಳಿದೆ ಕಾಣೋ ....ಫೂಲ್!

[ ಸ್ಕ್ಯಾಟು ಮಾಸ್ಟರ್ ಹೊರಡುವನು ]

**ಕಿಟ್ಟಿ —** (ತ ನ್ನ ಲ್ಲಿ) ಫೂ ಲೋ ನಾ ನು! (ತ ನ್ನ ನ್ನೇ ನೋಡಿಕೊಳ್ಳುತ್ತಾ)........ನಿಜವೇ!........ರ್‍ಯಾಲೀಗೆ ಮೊದಲ್‌ದಿನ ಸೇರೋದು ಬಿಟ್ಬಿಟ್ಟು.....ಮೂರ್ ತಿಂಗಳ್‌ಮುಂಚೇನೆ ಸೇರ್ಕೊಂಡು ಒದ್ದಾಡ್ತೇನಲ್ಲ! ಅವನು ಹೇಳಿದ್ಹಾಗೆ ಫೂಲೇ ನಾನು! ಇನ್ ಮೂರ್ತಿಂಗಳ್ಯಾಕೋ? ಓಹೋ! ಈಗ ಬೇಸ್ಗೆ ಕಾಲ....ಕೆಸ್ರು ಸಿಕ್ಕೋದು ಕಷ್ಟ....ರ್‍ಯಾಲೀಗೊಂದು ಮಳೆಯಾದ್ರೂ ಬರ್ಬೇಕೋ ಏನೋ! ದೇವರ್‌ದಯ ಹೇಗಿರುತ್ತೋ!....ಮಳೀಗೇನೂ........ ಒಂದು ಗಾಳಿ ಬೀಸಿ ಮೋಡಗಳ್ನ ಕವಿತ್ಕೊಂಬಿಟ್ರೆ ಸರಿ!....ಅದಕ್ಕೇ ಆ ಶಾಸ್ತ್ರಿಗಳು ಹೇಳಿದ್ದೋ ಏನೋ....'ದಿವ್ಯವಾಗಿಥೇಂ' ತ....ಮಳೆ ಬಂದ್ರೂ ಬರಬಹುದು....ನಾಡಿದ್ದು....ನಾನುಗಾನ ಎಸ್ಸೆಂ ಆಗಿದ್ರೆ ಆಗಾಗ್ಯೆ ಕೊಳಾಯಿ ನೀರ್ನಲ್ಲೇ ಕೆಸ್ರು ಮಾಡ್ಕೊಂಡು.....ಬೇಕು ಬೇಕಾದಾಗ......ರ್‍ಯಾಲಿ ಇಟ್ಕೊಂಡು.....

[ಹಾಗೆಯೇ ನಿಧಾನವಾಗಿ ಹೊರಡುವನು.]

# ದೃಶ್ಯ ೬.

[ಮಗುವಿನ ಮನೆಯ ದಿವಾಣಖಾನೆಯ (Drawing Room): ಸೋಫಾ ಗಳಿಂದಲೂ, ಗುಂಡು ಮೇಜುಗಳಿಂದಲೂ, ಗೋಡೆಗೆ ಹಾಕಿದ ದೊಡ ನಿಲುಗನ್ನಡಿಗಳಿಂದಲೂ ತುಂಬಿರುವುದು]

ಪ್ರವೇಶ—ಕಿಟ್ಟಿ, ಮಗೂ.

**ಕಿಟ್ಟಿ—**(ಜುಗುಪ್ಸೆಯಿಂದ ಕೋಣೆಯ ಸುತ್ತಲೂ ನೋಡುತ್ತ) ಥ್ಫೂತ್ ! ಲೋ ! ನಿಮ್ ತಾಯಿ........ನನ್ನೋಡಿ...... .. " ಏನೋ ಹೇಳ್ಬೇಕೂಂತಾರೆ " ಅಂದ್ಯಲ್ಲ......ಆ ಮರ್ಯಾದೇಗೆ ಬಂದ್ನೇ ಹೊರ್ತು ......(ಕೈಯಿಂದ ಕೋಣೆ ಸುತ್ತಲೂ ತೋರಿಸುತ್ತಾ) ಈ ಶನಿಜಾತೀಗೆ ಸೇರಿದವ್ರು ನೀವೂಂತ ಮೊದ್ಲೇ ತಿಳ್ದಿದ್ರೆ ಬಾಬಯ್ಯನ ಆಣೆಗೂ ಬರ್ತಿರಲಿಲ್ಲ......ನಿಮ್ಮೀ ಹಾಳು ಬಂಗ್ಲೇಗೆ !

**ಮಗೂ —** (ವಿಸ್ಮಿತನಾಗಿ) ಶನಿ ಜಾತಿ! . ....ನಾವೂ ನಿಮ್ ಜಾತೀನೇಕಾಣೋ.. .ಬ್ರಾಹ್ಮಣ್ರು... ಸ್ಮಾರ್ತರು......ಕಮ್ಮೆಗಳು !

**ಕಿಟ್ಟಿ —** ನಾನು ಹೇಳೋ ಜಾತಿ ಆ ಜಾತಿ ಅಲ್ಲಾ ಕಾಣೋ, ಉಲ್ಲು! .. ಈಗ್ ನೋಡು! ಬ್ರಾಹ್ಮಣ್ರು.... ಕ್ಷತ್ರಿಯರು.... ಈ ಬಾಬ್ತು ಗ್ಳಾಗ್ಲಿ . .ವೈಷ್ಣವ್ರು ....ಸ್ಮಾರ್ತರು......ಈ ಬಾಬ್ತುಗ್ಳೇ ಆಗ್ಲಿ ........ ಇವುಗಳ್ನೆಲ್ಲಾ ಏರ್ಪಡಿಸಿದ್ದು ದೇವ್ರು... ಸ್ವಾಮಿಗಳು . . .ಮಠಾಧಿ ಪತಿಗಳು......ವಗೈರೆ !..... ಈ ಬಾಬ್ತುಗಳೆಲ್ಲಾ ಎಗರಿಹೋಗಿ ಎಷ್ಟೋ ದಿನಗಳಾದ್ವು......ಈಗ ಸದ್ಯ ಇರೋ ಜಾತಿಗಳೆರಡೇ ಎರಡು . .ನಾವ್ ನಾವೆ ಏರ್ಪಡಿಸಿಕೊಂಡದ್ದು.....ದುಡ್ಡಿರೋವ್ರು ...... ದುಡ್ಡಿಲ್ದೋರು ಅಂತ......ಆದರಲ್ಲೂ ಇನ್ ಬ್ರಾಹ್ಮಣ್ರಲ್ಲೋ, ದೇವರು ಹಣೇಲಿ ಬರೆದದ್ದು ಪಂಗ್ನಾಮವೇ ಆಗ್ಲಿ......ಅಂಗಾರ ಮುದ್ರೇನೆ ಆಗ್ಲಿ......

ಅಷ್ಟಂಥವೇ ಆಗ್ಲಿ . ಬ್ರಾಹ್ಮಣರಲ್ಲೆರಡೇ ಜಾತಿ !....ಬಡವ್ರು!........ ಬಡಾಯಿಗಳೂಂತ!....ದುಡ್ಡು ಮೈ ಬೊಗ್ಗವ್ರು....ದುಡ್ಡಿಂದ್‌ತ್ತಲೆ ಕೊಬ್ಬಿದ್ವ್ರೂಂತ ಎರಡೇ ಜಾತಿ!!

**ಮಂಗೂ —** ತಲೆ ಕೊಬ್ಬಿದ್ವ್ರೂಂದ್ರೇನೋ?........ನೀನು ಹೇಳೋದೊಂದೂ ಅರ್ಥವಾಗ್ಲಿಲ್ಲ !....

**ಕಿಟ್ಟಿ —** ಹಾಗಾದ್ರೆ....ನಂ ಶಾಸ್ತ್ರಿಗ್ಳು ಹೇಳೋಹಾಗೆ........ "ಉದಾಹರಣ ಪೂರ್ವಕವಾಗಿ ಹೇಳುವಂಥಾವನಾಗುವೆನು........ ಕೇಳುವಂಥಾವನಾಗೋ ಗುಗ್ಗು ! ಕಿವಿ ಬಿಚ್ಕೊಂಡು ಕೇಳುವಂಥಾವ ನಾಗು"! (ಗೋಡೆಗೆ ತಗಲಿಸಿರುವ ದೊಡ್ಡ ನಿಲುಗನ್ನಡಿಯ ಬಳಿಗೆ ಹೋಗಿ) ಇಲ್ನೋಡೊ !....ಇದ್ಯಾರದೊ ಈ ಕನ್ನಡಿ ?

**ಮಂಗೂ —** ನಮ್ಮಪ್ಪನ್ದು !....

**ಕಿಟ್ಟಿ —** ನಿಮ್ಮಪ್ಪನ್ದೋ ....ಯಾಕೋ ಇದಿವ್ನಿಗೆ ?

**ಮಂಗೂ —** ಒಳ್ಳೇ 'ಯಾಕೋ'!....ಯಾಕೇನೊ ? ... . ಮುಖ ನೋಡ್ಕೊಳ್ಳೋಕೆ !....

**ಕಿಟ್ಟಿ —** (ಎರಡು ಅಂಗೈಗಳನ್ನೂ ಒಂದು ಮೊಳದಷ್ಟು ದೂರ ದೂರವಾಗಿಟ್ಟುಕೊಂಡು ಕುಲುಕಿಸುತ್ತಾ) ಹಾಗಾದ್ರೆ...... ನಿಮ್ಮಪ್ಪನಿಗೇನ್ ಇಷ್ಟು ದೊಡ್ಡ ತಲ್‌ಕಾಯೇ ?

**ಮಂಗೂ —** ಮುಖ ಒಂದೇ ಅಲ್ಲ ಕಣೋ, ಮೈಯೆಲ್ಲಾ ನೋಡ್ಕೋಬಹುದು.........

**ಕಿಟ್ಟಿ —** (ನಗುತ್ತಾ) ಹಯ್ಯೋ ಮಂಕೂ! ಕುತ್ಗೆ ಬಗ್ಗಿ ಸ್ಕೊಂಡು ತನ್ನ ಕಣ್ಣಿಂದ್ಲೇ ನೋಡಿದ್ರೆ.....ಮೈ ಚೆನ್ನಾಗ್ ಕಾಣತ್ತೋ......ಇಲ್ಲ......ಕನ್ನಡಿ ಎದುರಿಗೆ ಕುಣ್ದಾಡ್ತಾ......ಅದರಲ್ಲಿ

ನೋಡ್ಕೊಂಡ್ರೆ ಕಂಡ್ಬರತ್ತೋ ಚೆನ್ನಾಗೀ....? (ತಾತ್ಸಾರದಿಂದ) ಕೈಲಿ ಹುಣ್ಗಿಣ್ಣಿದ್ದರೆ ಹ್ಯಾಗೆ ನೋಡ್ಕೊಳ್ಳೋದೋ ಈ ಕನ್ನಡೀಲಿ?.....ಹೇಳ್ತೀನೆ ಕೇಳೋ....ಇದೆಲ್ಲಾ ದುಡ್ಡಿನ ಕೊಬ್ಬು ಕಾಣೋ ಯಾವ ಮಂಕೋ ಏನೋ ಅಲ್ಲಿ ಆಫೀಸ್‌ನಲ್ಲಿ ಸುರೀತಾನೆ ಖಜಾನೆ ದುಡ್ಡು! ...ಅದನ್ನ ಬಾಚ್ಕೊಂಬರೋದು . ಅಲ್ಲಿ ಷಾಪ್ನೌನ ಬೊಕ್ಸಕ್ಕೆ ಸುರಿಯೋದು.... ಅಲ್ಲಿಂದ ಬಾಚ್ಕೊಂಬರೋದು ಅವನಿಗೆ ಬೇಡದ್ ಸಾಮಾನುಗಳ್ನೆಲ್ಲಾ.....ಪೇರಿಸ್ಕೊಳ್ಳೋದು ಮನೇತುಂಬಾ......ದೊಡ್ಡ ಮನುಷ್ಯರ ಜಾತಿ! .. ನಮ್ಮಣ್ಣ ಕೂಡ ....ನಂ ಜಾತಿಲ್ಹುಟ್ಟಿದೌನು ... .... ಮುಂಡೇಗೆ ಹಣದ್ಕೊಬ್ಬು ಏರತ್ಲಾನೂವೆ.....ಜಾತಿ ಖರಾಬಾಗ್ಹೋದ.....

**ಮಗೂ** — ಏನ್ ಜಾತಿ ಖರಾಬಾಗ್ಹೋದ?

**ಕಿಟ್ಟಿ** — ನಂ ಜಾತಿ ಕೆಟ್ಟು ನಿಂ ಜಾತೀಗೆ ಸೇರ್ಕೊಂಬಿಟ್ಟ .. ದೊಡ್ಡ ಮನುಷ್ಯರ ಜಾತೀಗೆ! .. ನಿಮ್ಹಾಗೆ ಔನೂನು ಗೋಡೆ ಕಟ್ಟಿದ ಮನೆ ಸುತ್ಲೂ . ಇನ್ನೊಂದ್ಗೋಡೆ ಕಟ್ಕೊಂಡು ಕೂತ್ಕೊಂಡಿದ್ದಾನೆ! ಕೂಡ್ಹಾಕ್ತಾ, ಕಾಸಿಗ್ಕಾಸು, . "ತಾನೂ ತಿನ್ನ....ಪರರಿಗೂ ಕೊಡಾ"ಂತ......ಆ 'ದಿ ಡಾಗ್ ಅಂಡ್ ದಿ ಮ್ಯಾನೇಜರ್' ಕಥೆ ಬರುತ್ತಲ್ಲಾ ಈಸೋಪ್ಸ್ ಫೇಬಲ್ಸಿನಲ್ಲಿ .... ಹಾಗೆ ...... (ಸುತ್ತ ಮುತ್ತಲೂ ನೋಡುತ್ತಾ) ನಿಮ್ಮ ಜಾತೀಗೆಲ್ಲಾ ಮೋಕ್ಷಕೊಂದೇ ಛಾನ್ಸು ಕಣೋ! ನಿಂ ಕಾಫಿ ನಿಂ ಕಾಪೌಂಡು.........ಎರಡೂ ಕಟಾಯಿಸ್ಬಿಟ್ರೇನೆ ಕರಗೋದು ನಿಂ ಕೊಬ್ಬು!

[ ಒಳಗಿನಿಂದ 'ಮಗೂ!' ಎಂದು ಕೇಳಿಬರುವುದು ]

**ಮಗೂ** — (ಥಟ್ಟನೆದ್ದು) ಓ! ನಂ ಮದರ್ ಕಣೋ!...... (ಗಟ್ಟಿಯಾಗಿ) ಇಲ್ಲಿದೇನಮ್ಮಾ!.....

**ತಾಯಿ** — (ಪ್ರವೇಶಿಸಿ) ಬಂದಿದ್ದೀಯ? (ಕಿಟ್ಟಿಯನ್ನು ಗಮನಿಸಿ) ನಿನ್ ಸ್ನೇಹಿತನ್ನ ಕರ್ಕೊಂಬಂದಿದ್ದೀಯಾ! (ಕಿಟ್ಟಿಯನ್ನು ಕುರಿತು ಒಂದು ಸೋಫಾವನ್ನು ತೋರಿಸಿ) ಕೂತ್ಕೋ ಮಗೂ.... ಯಾಕೆ ನಿಂತಿದ್ದೀಯ? ...

**ಕಿಟ್ಟಿ** — (ಕೈಯಿಂದ ಸೋಫಾ ಕುರ್ಚಿಯನ್ನು ಸೂಚಿಸುತ್ತಾ, ಮುಖವನ್ನು ಸೂರಿಗೆ ಎತ್ತಿ) ಈ ಬಾಬತ್‌ಗಳಲ್ಲೆಲ್ಲಾ ಕುಕ್ಕರ್ಸೋ ಅಭ್ಯಾಸ ಇಲ್ಲವಮ್ಮಾ ನನಗೆ; ನೆಟ್ಕೊಂಡಿದ್ರೆ .....ನೋಯೋ ಹಾಗೇನೂ ಇಲ್ಲ... ...ನನ್ ಕಾಲುಗ್ಳು! .. ನಿಂತೇ ಇರ್ತೀನವ್ಮಾ.....

**ತಾಯಿ** — (ಮುಗುಳು ನಗೆಯಿಂದ) ಅಭ್ಯಾಸ ಏನು ಬೇಕಿದಕ್ಕೆ ಮಗೂ?

**ಕಿಟ್ಟಿ** — ನಂ ಮನೇಲಿ ಈ ಬಾಬತ್ಗಳೇನೂ ಇಲ್ಲಾವ್ಮಾ; ನೆಲದಲ್ಲೇ ಕುಕ್ಕರ್ಸೋದು, .....ಅದೂ ಅಲ್ದೆ... .ನಿಂ ಜಾತಿಯವ್ರು. ಅಲ್ಲ......ದೊಡ್ಡ ಮನುಷ್ಯರ್ಗಳ ಮನೇಲಿ ..ಹೆಜ್ಜೆ ಇಟ್ಟದ್ದು . ಇದೇ ಮೊದಲ್‌ದಫಾ.... ಅಲ್ಲಾ ಸಾರ್ತಿ. ಅದೂನೂ ನನ್ನ ಖುಷಿ .. ಅಲ್ಲ.....ನನ್ನ ಇಷ್ಟದ ಮೇಲಲ್ಲಾ, ಈ ಗುಬ್ಬಚ್ಚಿ.....ಅಲ್ಲ.....ಈ ಮಗುವಿನ ದೋಸ್ತಿ ....ಅಲ್ಲ.....ಸ್ನೇಹದ ಮೇಲೆ ಬಂದದ್ದು ಇಲ್ಲಿಗೆ... .

[ ತಾಯಿಯು ವಿಸ್ಮಿತಳಾಗಿ ಕಿಟ್ಟಿಯನ್ನು ರೆಪ್ಪೆ ಮುಚ್ಚದೆ ನೋಡುತ್ತಿರುವಳು ]

**ಮಗೂ** — (ಘೊಳ್ಳನೆ ನಕ್ಕು) ಈವತ್ತೆಲ್ಲಾ ಕಣ್ಬಿಟ್ ನೋಡ್ತಿದ್ರೂ.....ನಂ ಕಿಟ್ಟೀನ್ ಸ್ವಭಾವ ಗೊತ್ತಾಗೋದಿಲ್ಲವ್ಮ ನಿನ್ಗೆ .....ಅವನು ಬಲು ಪ್ರೌಢೂ.....ನಂ ಜಾತೀ ಅಂದ್ರೆ ಬೆಂಕಿ ಔಸಿಗೆ.....

**ತಾಯಿ** — 'ನಂ ಜಾತಿ'! ಯಾಕೆ ಈ ಮಗೂನೂ ಬ್ರಾಹ್ಮಣರ ಮಗು ಅಲ್ವೇ?

**ಮಗೂ —** (ಬದಲು ಹೇಳಲುದ್ಯುಕ್ತನಾದ ಕಿಟ್ಟಿಗೆ ಅಡ್ಡ ಮಾತಾಗಿ) ಸ್ವಲ್ಪಿರು ಕಿಟ್ಟಿ! ..ನಾನೇ ಎಕ್ಸ್‌ಪ್ಲೇನ್ ಮಾಡ್ತೇನೆ! ದೊಡ್ಡಕಥೇನಮ್ಮಾ ಅದು (ತಾಯಿಯನ್ನು ಮೆಲ್ಲಗೆ ಸೋಫಾ ಮೇಲೆ ಕೂಡಿಸುತ್ತಾ) ಕೂತ್ಕೋಮ್ಮ ಹೇಳ್ತೇನೆ.... (ತಾಯಿಯ ಪಾದಗಳ ಹತ್ತಿರ ನೆಲದ ಮೇಲೆ ಕುಳಿತುಕೊಂಡು ತನ್ನ ಪಕ್ಕವನ್ನು ಸೂಚಿಸುತ್ತಾ ಕಮಾನ್ (come-on) ಕಿಟ್ಟೀ!... ಕೂತ್ಕೋ!..... ನಿಂ ಜಾತಿ ಮನೆಗಳಲ್ಲೂ ನೆಲ ಇಥೇ ಅಲ್ವೇ?

[ಕಿಟ್ಟಿಯು ಮೋರೆಯನ್ನು ಸೊಟ್ಟಮಾಡಿಕೊಂಡು ಕೂರುವನು.]

**ತಾಯಿ —** (ಮುಗುಳು ನಗೆಯಿಂದ) ಏನ್ಮಗೂ......ಜಾತಿ.... ಜಾತೀನ್ನೋದು?

**ಮಗೂ —** ಕೇಳಮ್ಮಾ... ಕಿಟ್ಟೀ ಲೆಕ್ಕದಪ್ರಕಾರ ...ಮೊದಲು ನಾವೆಲ್ರೂ ಬ್ರಾಹ್ಮಣರ ಜಾತೀಗ್ ಸೇರಿದ್ರೋನೂವೆ.....ಈಗಿನ ಕಾಲ್ದಲ್ಲ ಬ್ರಾಹ್ಮಣರಲ್ಲಿ ಕೆಲವ್ರು ಜಾತಿ ... .... ಖರಾಬಾಗಿ ಹೋಗ್ಬಿಟಿದ್ದಾರೆ.

**ತಾಯಿ —** (ವಿಸ್ಮಿತಳಾಗಿ) ಜಾತಿ ಖರಾಬ್ ಅಂದ್ರೇನೋ? ...'ಖರಾಬು'?....ಎಲ್ಲಿ ಕಲೀತೀರೋಪ್ಪ ಈ ಮಾತುಗಳೆಲ್ಲಾ?.... ಖರಾಬು ಅಂದ್ರೇನೋ?

**ಮಗೂ —** ಖರಾಬು ಅಂದ್ರೆ . ಹಾಳಾಗ್‌ಹೋಗೋ.....ಅಲ್ಲ .(ಕಿಟ್ಟಿಗೆ) ಕರೆಕ್ಟ್ ಮೀನಿಂಗ್ (correct meaning) ಏನ್ ಕಿಟ್ಟಿ ಖರಾಬ್ಗೆ?

**ಕಿಟ್ಟಿ —** (ಗುಸುಗುಟ್ಟುತ್ತಾ) ಒಳ್ಳೇ ಕಾಟಾನೋ ನಿಂದು! ಖರಾಬಾಗೋದು ಅಂದ್ರೆ .. . ಕೆಟ್ಹೋಗೋದು . ಜಾತಿ ಕೆಟ್ಹೋಗೋದು ಯಾಕೆ ಬಿಚ್ತೀಯೋ ಈ ಕಂತೇನೆಲ್ಲಾ ಈಗ?

**ಮಗೂ** — (ತಾಯಿಗೆ) ಜಾತಿ ಕೆಟ್ಹೋಗಿಬಿಟ್ಟಿದಾರೆ!.. ಇದಕ್ಕೆಲ್ಲಾ ಕಾರ್ಣ ದುಡ್ಡಂತೆ!..ದುಡ್ಡು ಕೈ ಸೇರತ್ಲೂನೂವೆ. ಮಂಡೇ ತುಂಬಾ ಕೊಬ್ಬು ತುಂಬಿಸಿಬಿಟ್ಟು.....ಬ್ರಾಹ್ಮಣ್ರ ಜಾತಿ ಕೆಡಿಸಿ.. "ಬಡಾಯ್ ಜಾತೀಂ"ತ ಇನ್ನೊಂದು ಜಾತೀಗೆ ಸೇರಿಸಿ ಬಿಡುತ್ತಂತೆ !.....ದುಡ್ಡು !....ಇವರಣ್ಣಾನೂ ಇವ್ರ ಜಾತೀಲೇ ಹುಟ್ಟಿ ಬೆಳ್ದು, ಅವನಿಗೆ ದುಡ್ಡು ಸೇರತ್ಲೂನೂವೆ....ತಲ್ಕಾಯಿ ತುಂಬಾ.... ಕೊಬ್ಬು ತುಂಬ್ಕೊಂಡ್..... ಬಿಟ್ಟು ನಂ ಜಾತೀಗೆ ಇಳಿದ್ಬಿಟ್ಟಿದಾನಂತೆ ಈಗ !

**ತಾಯಿ** — ಇವರಣ್ಣ ? (ಕಿಟ್ಟಿಗೆ) ಹೆಸರೇನ್ ಮಗೂ ಏನ್ಕೆಲ್ಸಾ ನಿಮ್ಮಣ್ಣನಿಗೆ ?

**ಕಿಟ್ಟಿ** — (ನೀರಸವಾಗಿ) ಕಛೇರಿ ಕೆಲ್ಸಾವಮ್ಮಾ........ ಕಮಿಷ್ನೆರಿ ಕೆಲ್ಸ !

**ತಾಯಿ** — ಹೆಸರೇನ್ ಮಗೂ ?

**ಕಿಟ್ಟಿ** — ರಾಮೂಂತ ಮನೇಲಿ ಕೂಗ್ತಿದ್ದದ್ದು ಮೊದಲು..... ಈಗ ಸಿ. ಆರ್. ರಾಮಚಂದ್ರಯ್ಯ, ಬಿ.ಎ. ಎಸ್ಕ್ವಯರ್, ಪಸ್ಕ್ವಯರ್ .. ಲೊಟ್ಟೊ ಲೊಸ್ಕೂಂತ .. ಬಾರುದ್ದ ಬಾಲಂಗೋಚಿ ಕಟ್ಕೊಂಡು ಕೂತಿದಾನೆ.....ಬಸ್ವನ್‌ಗುಡೀ ಬಂಗ್ಲೇಲಿ.....!

**ತಾಯಿ** — ಓಹೋ! ಗೊತ್ತಾಯ್ತು ಮಗೂ!....ಆತನ್ನ ತಾನೇನೋ......ನೆನ್ನೆ ನಿಂ ತಂದೆ......"ಬಲು ಗಟ್ಟಿಗಾ ಅತಿ ಬುದ್ಧೀ" ಅಂತಂದದ್ದು ?

**ಕಿಟ್ಟಿ** — "ಅತಿ ಬುದ್ಧೀಂ"ದ್ರೆ ಅವನೇ ಇರಬೇಕವಮ್ಮಾ ! ಜಗತ್ನಲ್ಲಿ ಯಾವ ಬಾಬತ್ನಲ್ಲೂ.....ಅತಿ.....ನಮ್ಮಣ್ಣ !

**ತಾಯಿ —** (ಮಗುವಿಗೆ) ಹಾಗಾದ್ರೀ ಮಗೂ......ಬಸವನ ಗುಡೀಲಿದ್ಕೊಂಡು ನಿನ್ ಜೊತೇಲಿ ಹ್ಯಾಗೆ ಬರೋಕಾಗತ್ತೆ...... ದಿನಾನು ?

**ಮಗೂ —** ಬಸವನ್‌ಗುಡೀಲಿರೋದು.... ಇವರ ಅಣ್ಣಾವ್ರಮ್ಮಾ! ಕಿಟ್ಟಿ ಮನೆ ನಂಪೇಟೇಲೇ !

**ತಾಯಿ —** ಹಾಗಾದ್ರೆ . ನಿಂ ಜನಗಳ್ನ ಬಿಟ್ಟು .. ನೀನೆಲ್ಲಿ ಧೀಯಾ ಮಗೂ ?

**ಮಗೂ —** ಕಿಟ್ಟೀ ಜನಗಳೆಲ್ಲಾ ಇಲ್ಲೀ ಇಧಾರಮ್ಮಾ ! . . ಅವರಣ್ಣಾ ಮಟ್ಗೆ.... ಜಾತಿಕೆಟ್ಟು.... ಬಿಟ್ಟುಹೋದ್ದು .. .ಬಂಗ್ಲೀಗೆ. ಅಲ್ವೀ ಕಿಟ್ಟೀ... (ಮೆಲ್ಲಗೆ ಕಿಟ್ಟಿಯ ಹೆಗಲ ಮೇಲೆ ಕೈ ಹಾಕಿ ಕೊಂಡು) ಕಿಟ್ಟೀಗೆ ಪಾಪ, ತಾಯಿ ಇಲ್ಲಾಮ್ಮಾ . ಮಂತ್ರೆ ಅವರಕ್ಕನೂ .

**ಕಿಟ್ಟಿ —** (ಮಗುವಿನ ಕೈಯನ್ನೊದರಿ) ಸಾಕು ನಿಲ್ಸೋ ....

[ಥಟ್ಟನೆದ್ದು ಗೋಡೆ ಹತ್ತಿರ ಹೋಗಿ ಮುಖವನ್ನು ಗೋಡೆ ಕಡೆಗೆ ತಿರುಗಿಸಿ ಪಟವೊಂದನ್ನು ನೀರಸವಾಗಿ ಗಮನಿಸುತ್ತಿರುವನು......ಮಗೂ, ತಾಯಿಯ ಕಿವಿಯಲ್ಲಿ ಗುಸುಗುಟ್ಟುವನು.]

**ತಾಯಿ —** (ಥಟ್ಟನೆದ್ದು ಮುಖದಲ್ಲಿ ಪಶ್ಚಾತ್ತಾಪವನ್ನು ಪ್ರಕಟಿಸುತ್ತಾ, ಕಿಟ್ಟಿ ಇರುವ ಕಡೆಗೆ ಬಂದು).... ಇದ್ಯಾಕ್ ಮಗೂ ? ......ನಮ್ಹುಡುಗ......ಮನೇ ಮಾತು ಎತ್ತಿದಾಂತ, ಕೋಪವೇ ?

**ಕಿಟ್ಟಿ —** (ದೈನ್ಯದಿಂದ) ಕೋಪ ಏನಮ್ಮಾ .

**ತಾಯಿ —** (ವಿನಯವಾಗಿ) ಮತ್ಯಾಕೆ ಎದ್ಬಂದದ್ದು ಮಗೂ?

**ಕಿಟ್ಟಿ —** (ಒಣಗಿದ ಸ್ವರದಿಂದ) ಏನೂ ಇಲ್ಲವಮ್ಮಾ ನಂತಾಯಿ ಜ್ಞಾಪಕ ಬಂದು...

**ತಾಯಿ—** (ಹತ್ತಿರ ಬಂದು, ಕಿಟ್ಟಿಯ ತಲೆಯನ್ನು ಸವರುತ್ತಾ ಮೃದುವಾಗಿ) ಪಾಪ.... ಏನು ಮಾಡೋದಪ್ಪ ...ಈ ಹಾಳ್ ಪ್ರಪಂಚ ದಲ್ಲಿ ಹುಟ್ಟಿದಮೇಲೆ ...ದೇವ್ರು ಏನ್ ಕಷ್ಟಗಳನ್ನು ಕಳಿಸಿದ್ರೂನೂವೆ ......ಅನುಭವಿಸಿಯೇ ತೀರಬೇಕಪ್ಪಾ! ಆಕೇನೂ ಪಾಪ,......ಮನೇಲಿ ಮಕ್ಕಳ್ನ ಇಟ್ಟಿಟ್ಟು ಹೋಗೋವಾಗ.....ಎಷ್ಟು ಸಂಕಟ ಪಟ್ಟಿರಬೇಕೋ ಕಾಣೆ!

**ಕಿಟ್ಟಿ —** (ತುಳುಕಿ ಬರುವ ದುಃಖವನ್ನು ಅಡಗಿಸಲಾರದೆ) ಹೋಗೋ ಸಂಕ್ಟ ಒಂದೇ ಇದ್ದಿದ್ರೆ....ಎಷ್ಟೋ ಮೇಲಾಗಿರ್ತಿತ್ತವಮ್ಮಾ! . ಅದೊಂದೇ ಅಲ್ದೆ...ಮನೇಲೆಷ್ಟೋ ಗೋಳುಗ್ಳೆಲ್ಲಾ ನೋಡೀ ನೋಡೀ ಬದುಕ್ಬೇಕೂಂಬೋ ಆಸೆ ಕೂಡ ಇಲ್ಲದ ಸ್ಥಿತೀಗೆ ಬಂದುಬಿಟ್ಳವಮ್ಮಾ...

**ತಾಯಿ —** (ಕಿಟ್ಟಿಯನ್ನು ಕೈ ಹಿಡಿದು ಕರೆದುಕೊಂಡು ಹೋಗಿ ಸೋಫಾವಿನಲ್ಲಿ ಮೆಲ್ಲಗೆ ಕೂಡಿಸಿ ಪಕ್ಕದಲ್ಲಿ ಕುಳಿತು ಆವನ ತಲೆಯನ್ನು ಸವರುತ್ತಾ) ತ್ಸು! ತ್ಸು! ತ್ಸು! ...ಎಷ್ಟು ದಿನ ಆಯ್ತು ಮಗು......ನಿಂ ತಾಯಿ ಹೋಗಿ? ಅದೂ ಅಲ್ದೆ ನಿಂಭಾವಾನೂ ಹೋಗ್ಬಿಟ್ಟಾಂತಾನಲ್ಲ ನಮ್ಮಗೂ? ಇದ್ಯಾವಾಗ?

**ಕಿಟ್ಟಿ —** ಯಾವಾಗೇನವಮ್ಮಾ ..ಅದೇ....ಆ ಇಞ್ಫ್ಲುಯೆಂಜಾ ಗಲಾಟೇಲಿ!.....(ಮೆಲ್ಲಗೆದ್ದು ನಿಂತುಕೊಂಡು ಮುಖವನ್ನು ತಿರುಗಿಸಿ ಕೊಂಡು) ಮೊದಲು ನಮ್ಮಮ್ಮನಿಗೇನೇ ಬಂದದ್ದು 'ಜ್ವರ.....ಆಗ ನಂಮನೇಲಿ......ನಾನು, ನಮ್ಮಪ್ಪ, ನಮ್ಮಮ್ಮ ....ಮೂರ್ ಜನಾನೇ ಇದ್ದದ್ದು ಮನೇಲಿ......ನಮ್ಮಮ್ಮ,.....“ಅಕ್ಕನಿಗೇನೂ ಬರೀಬೇಡಾ

......ಬೆದರಿಗಿದರ್‍ಯಾಳು" ಅಂತಂದ್ಲು......ಅವ್ರ ಮಾತು ಕೇಳ್ದಿ ನಮ್ಮಪ್ಪ,
......ಏನೋ! ಹ್ಯಾಗಿರುತ್ತೋಂತ ಹೆದರ್ಕೊಂಡು...ಬರ್ದೀ ಬಿಟ್ಟ...
ನಮ್ಮಕ್ಕನಿಗೆ....ಬರದ ಮೂರ್ನೇ ದಿನ ಅವನೂ ಬಿದ್ಗೊಂಡ..
ಆದ್ರೂನೂ, ಅಲ್ಲಿ, ಇಲ್ಲಿ, ಓಡಾಡಿ.....ಔಷ್ಧಿ ಗಿವ್ಷ್ಧಿ . ಸಂಪಾದಿ
ಸ್ಕೊಂಡು ನೋಡ್ಕೊಳ್ತಾ ಇದ್ದೆ.....ತಕ್ಮಟ್ಟಗೆ ... ಅಷ್ಟರಲ್ಲೇ,......
ನಮ್ಮಕ್ಕ—ಅವಳೊಬ್ಬ ಮಂಕು—'ಅಮ್ಮನಿಗ್ ಗುಣವಾದ್ದಕ್ಕೆ.
ಕಾಗ್ದ..........ಬರ್ಲಿಲ್ಲಾ'ಂತ ಬೆದರ್ಕೊಂಡು ಗೋಳಾಡೋದ್
ನೋಡ್ಲಾರ್ದೆ.. ಸಂಭಾವ, ಕೋಲಾರ್ದಲ್ಲಿ ಲಾಯರಿ ಮಾಡ್ತಿದ್ದಾಮ್ಮಾ
ಅಕ್ಕನ್ನೂ ಅವಳ ಕೂಸ್ನೂ ಕರ್ಕೊಂಡ್ ಬಂದ್ಬಿಟ್ಟಾಮ್ಮ ಇಲ್ಲಿಗೆ.
(ದುಃಖವನ್ನು ತಡೆಯಲಾರದೆ) ಬಂದು ಮನೇಲಿ ಹೆಜ್ಜೆ ಇಟ್ಟ್ದಿನಾನೆ
ಅವ್ನೂ ಬಿದ್ಕೊಂಡಾಮ್ಮ! ಏನ್ ಶನೀ ಜ್ವರವೋ ಕಾಣೆ? ಒಂದ್
ವಾರ್ದಿಂದ ನರಳ್ತಿದ್ದ.. ವಯಸ್ಸಾದೋರು...ಅಮ್ಮನೂ ಅಪ್ಪನೂ
ಗಟ್ಟಿಯಾಗಿದ್ರೂ ಅವನು ಜ್ವರಾಬಂದ ಮೂರ್ನೇ ದಿನಾನೆ ಪ್ರಾಣ
ಬಿಟ್ಟ! . ಅಮ್ಮನ ಗೋಳೋ.....ಹೇಳೋಕಾಗ್ದು ..ಅವಳೊಂದ್ಕಡೆ
ನರಳ್ತಿದ್ದಾಗ....ಡಾಕ್ಟರು.....ಪಾಪ!....ದುಡ್ಡು ಕೊಟ್ರೇನೆ ಔಷ್ಧ
ಅಂತಾನೆ.. ಮನೇಲೋ, ಗಂಜಿ ಮಾಡೋಕ್ ಗತಿಯಿಲ್ಲ ..ಇರ್
ನಮ್ಮಣ್ಣನ್ ಮಾತೆತ್ತಿದ್ರೇ, ನಮ್ಮಪ್ಪನಿಗೆ ಬೆಂಕಿ .. ..... ಅವನಿ
ಗ್ಮೊದ್ಲು, ಯಾವಾಗ್ಲೋ ಹೋಗಿದ್ದಾಗ, ನೋಡೋಕ್ ಪುರ್ಸೊತ್ತಿ
ಲ್ಲಾಂತ ನಮ್ಮಣ್ಣ ಅಂದದ್ದು ಜ್ಞಾಪ್ಕ;....ನನ್ಗೇ ... "ಎಷ್ಟ್
ಪಾಪಿಯಾದ್ರೂನೂವೆ......ಮನೇಲಿ ಹುಟ್ಟಿ ಬೆಳ್ದದ್ದು ಮರ್ತ್ಬಿಟ್ಟ್
ಸಹಾಯ ಮಾಡ್ದೆ ಇದ್ದಾನೆ! ಗಂಜೀಗೂ, ಔಷಧಕ್ಕೂ ಗತೀ ಇಲ್ದೆ
ಸಾಯ್ತಾ ಬಿದ್ದಿರೋ.....ಹೆತ್ತೋರ್ಗೆ......ಧರ್ಮಕ್ಕಾದ್ರೂ!" ಅಂಬೋ
ಹುಚ್ಚಿನ ಮೇಲೆ ನಮ್ಮಣ್ಣನ ಹತ್ರ ಹೋದೆ.....ಅವನ್ನ ಬೈದು ಏನ್
ಪ್ರಯೋಜ್ನ? ಅವ್ನೂ ಮಕ್ಳುಮರಿಯೋನು! ಈ ಜ್ವರಾ ಅಂಟ್ರೋಗ
ಅಂತ್ಲೋ ಯೇನೋ....ಗೇಟ್ ಒಳ್ಗೇ ನಿಂತ್ಕೊಂಡು.....'ಅವನಿಗೆ

ಬರೋ ಸಂಬ್ಳಾ ಎಲ್ಲ.....ಅವನಂತಸ್ತಿಗೆ ಸರಿಯಾಗಿ ಮಾಡೋ ಖರ್ಚಿಗೇ ಆಗತ್ತೇ'ಂದ್ಬಿಟ್ಟ ! ಇನ್ನೇನು ! ಭಾವ ಸತ್ತಾ !.....ಅವನ ಸಾವ್ನೂ.... ನಮ್ಮಕ್ಕನ ಹಣೇ ಬರಹಾನ್ನೂ ಜ್ಞಾನ ತಪ್ಪಿರೋ ನಮ್ಮಪ್ಪನ ಸ್ಥಿತೀನೂ ಇದೆಲ್ಲಾ ನೋಡ್ತಾ.....ಬಡ್ಕೊಳ್ತಾ ಪ್ರಾಣ ಬಿಟ್ಳು ನಮ್ಮಮ್ಮನೂವೆ ! (ಬಿಕ್ಕಿಬಿಕ್ಕಿ ಅಳುತ್ತಾ)......ನಮ್ಮಕ್ನೋ, ಗಂಡನ್ನೂ ಕಳ್ಕೊಂಡು .. ತಾಯೀನೂ ಕಳ್ಕೊಂಡು ಕೂಸ್ನ ಒಂದ್ಕಡೇ ಕಿತ್ತ್ ಎಸೆದ್ಬಿಟ್ಟು . ತಲೆ ಚಚ್ಕೊಳ್ತಿದ್ಲು.....ಒಂದು ಮೂಲೇಲಿ !..... ಏನುಮಾಡೋದಮ್ಮಾ ನಾನೀ ಗಲಾಟೇಲಿ !? ನಂ ಭಾವನ್ನ ಸಾಗ್ಸಿ...... ಇನ್ನ್ ಅವನಿಗ್ಬೇಕಾದ ಸೌದೆ ಸಂಪಾದ್ಸಿ.. .ಅವನ್ಸುಟ್ಟು... ತಿರುಗ್ಬಂದ ಮಾರ್ನೆ ದಿನಾನೆ.....ನಮ್ಮಮ್ಮನೂ ಹೋದದ್ದು.....ಏನ್ ಮಾಡೋದ್ ನಾನು !...ಅವಳನ್ನ್ ಸಾಗ್ಸೋದೆ? ಜ್ಞಾನ ಇಲ್ದೇ ಬಿದ್ದಿದ್ದ ನಮ್ಮಪ್ಪನ್ನ ನೋಡಿಕೊಳ್ಳೋದೆ? ನಮ್ಮಕ್ಕನ್ಗೆ ಧೈರ್ಯ ಹೇಳೋದೇ .. ಇಲ್ಲ . ಆ ಕಿರ್ಲ್ತಿದ್ದ ಕೂಸನ್ನ ಸುದಾರ್ಸೋದೇ .. ದಿಕ್ಕೇ ತೋಚ್ದೆ ಹೋಯ್ತು (ಬಿಕ್ಕಿಬಿಕ್ಕಿ ಅಳುವನು. ಮಗುವಿನ ತಾಯಿಯು ಹತ್ತಿರ ನಿಂತು ಅವನ ತಲೆಯನ್ನು ಸವರಲು.....ಅಲ್ಪ ರೋಷದಿಂದ) ನಂ ಮನೆ ಗೋಳ್ ನಿಮಗ್ಯಾಕಮ್ಮಾ ... ನನಗ್ಯಾಕೆ ನೀವ್ ಹೇಳಿ ಕಳ್ಸಿದ್ದು ?

**ತಾಯಿ —** (ಕಿಟ್ಟಿಯ ಕೈಯನ್ನು ಹಿಡಿದು) ಕೂತ್ಕೋ ಕಿಟ್ಟೀ ಹೇಳ್ತೀನೆ ! ಕಿಟ್ಟೀಂತ ಕೂಗ್ಬಹುದೇ ನಾನೂ ನಿನ್ನ ?

**ಕಿಟ್ಟಿ —** ಕೂಗೀಮ್ಮಾ......ಅದಕ್ಕೇನು ?

**ತಾಯಿ —** (ಕಿಟ್ಟಿಯನ್ನು ಸೋಫಾಮೇಲೆ ಎಳೆದು ಕುಳ್ಳಿರಿಸಿ ಪಕ್ಕದಲ್ಲಿ ಕುಳಿತು) ....ಈಗ ನೋಡು ಕಿಟ್ಟೀ ! ನಮ್ಮಗು.....ಈ ಬಾಯ್ ಸ್ಕೌಟೂ ಅಂತಾರಲ್ಲ......ಇದಕ್ಕೆ ಸೇರಿ ಒಂದು ವರ್ಷಕ್ಮೇಲೆ ಆಗ್ತಾ ಬಂತು.. .ಅದ್ರೂನೂವೆ......ಇವನ ಜತೇಲಿರೋವ್ರಲ್ಲಿ.....

ಒಬ್ಬನ್ನಾತು......ಒಬ್ಬನ್ನೆಸ್ರು.. ಮನೇಲಿ ಆಡಿದ್ದಿಲ್ಲ! ಆದ್ರೆ ಈಗ ಒಂದ್ ಹದ್ನೈದ್ ದಿವಸದಿಂದ......ನೋಡು......ಹಗಲು ರಾತ್ರಿ...... "ನಂಕಿಟ್ಟೀ ಹೀಗೆ" "ನಂಕಿಟ್ಟೀ ಹಾಗೆ"......"ನಂಕಿಟ್ಟೀ ಇವತ್ತಿ ದಂದಾ".... "ನಂಕಿಟ್ಟಿ ಇವತ್ತಿದ್ಮಾಡ್ದಾ"ಂತ ಯಾವಾಗ್ಲೂ ನಿನ್ನೆಸ್ರೇ ಅವನ್ಬಾಯಲ್ಲಿ!.....ಯಾವತ್ತೂ ಇಲ್ದೇ ಈ ಹದಿನೈದ್ ದಿವಸದಲ್ಲಿ ....ನನ್ನಮಗನತಲೆ ತುಂಬಾ ತುಳುಕ್ತಿರೋ ಈ ಅದ್ಭುತ ಸ್ನೇಹಿತನ್ನ .....ಹ್ಯಾಗಾದ್ರೂ ನೋಡ್ಬೇಕೂಂತ ನನ್ನಾಶೆ....ಈಗ ನಿನ್ನ ನೋಡಿ ನನ್ನಾಶೆ ಪೂರೈಸ್ಕೊಂಡೆ!.....ದೇವ್ರು......ನಂ ಗುಣ......ನಂ ಧೈರ್ಯ...... ನಂ ಧಾರಡ್ಯಾನ ಪರೀಕ್ಷೆ ಮಾಡೋಕೆ ಕಳ್ಸೋ ಕಷ್ಟಗಳನ್ನ ಹ್ಯಾಗಾದ್ರೂ ಅನುಭವಿಸಿಯೇ ತೀರ್ಬೇಕೂಪ್ಪ!.....ನನ್ಗಿನ್ನೂ ಅರ್ಥ ವಾಗಿಲ್ಲ...ಇಷ್ಟ್ ಘುಟ್ಟಿಗ.....ಇಷ್ಟ್ ಬುದ್ಧಿವಂತ......ಇಷ್ಟ್ ಚಿಕ್ ವಯಸ್ನಲ್ಲೇ ಇಷ್ಟು ದೊಡ್ಡ ಕೆಲ್ಸಕ್ಬಂದವ್ನು!......ಹೆತ್ತವ್ರಿಗೆ ಕಷ್ಟ ಕಾಲ ಬಂದಾಗ......ಹೃದಯಾನ ಘಟ್ಟಿಮಾಡ್ಕೊಂಡು... ಸ್ವಲ್ಪವೂ ಸಹಾಯ ಮಾಡ್ದೆ.....ಹ್ಯಾಗೆ ಸುಮ್ನಿದ್ದ?....ಚಿಕ್ಕಂದ್‌ನಲ್ಲೇ... ಒಂದ್‌ವೇಳೆ ಮನೇಲಿ ಜಗ್ಳ ಗಿಗ್ಳ ಏನಾದ್ರೂ ಆಡ್ಕೊಂಡು... ಮನೇ......ಬಿಟ್ಟು ಹೋಗ್ಬಿಟ್ನೇ?

**ಕಿಟ್ಟಿ —** ಚಿಕ್ಕಂದಿನಲ್ಲೇ ಜಗ್ಳ ಆಡ್ಕೊಂಡ್ ಹಾಳಾಗಿದ್ರೆ.... ಎಷ್ಟೋ ಮೇಲಾಗಿತ್ತೂವಮ್ಮಾ! ನಾವೀಗಿರೋ ಸ್ಥಿತೀಗೆ ಬರ್ತಿರ ಲಿಲ್ಲ!.....ನೀವ್ ಹೇಳಿದ್ರಲ್ಲ.... "ಅತಿ ಬುದ್ಧೀ"ಂತ......ಅದ್ರಿಂದ್ಲೆ ಬಂದದ್ದು ಈ ಅವಸ್ಥೆಯೆಲ್ಲಾ!.... ಮೊದಲು ಅವನು ಲೋವರ್ ಸೆಕೆಂಡರಿ ಫಸ್ಟಾಗಿ ಪ್ಯಾಸ್ ಮಾಡ್ದಾ.....ನಮ್ಮಪ್ಪ......ಯಾವ ಪುಣ್ಯ ಮಾಡಿದ್ನೋ ಕಾಣೆ! ಬೃಹಸ್ಪತಿ ಬಂದ್ ಸೇರ್ಕೊಂಡಿದಾನೆ ನಂ ಕುಟುಂಬ್ದಲ್ಲೀ......ಇನ್ನ್ ಇವ್ನಿಗೆ ಮುಂದಕ್ಕೆ ಬರೋ ದಾರೀನ ತೋರಿಸಿ ತೋಡಿದ್ರೇನೇ ನನ್‌ಜನ್ಮ ಸಾರ್ಥಕ್ವಾಗತ್ತೇ"ಂದ್ಕೊಂಡು

......ಷುರು ; ಯೊವ್ದಕ್ಕೂ ನಮ್ಮಣ್ಣನ್ನೇ ತಾರೀಫ್ ಮಾಡೋದಕ್ಕೆ ! ಇನ್ ಮೆಟ್ರಿಕ್ಯುಲೇಷನ್ ಫಸ್ಟ್ ಕ್ಲಾಸಿನಲ್ಲಿ ಗೆದ್ಮೋ ಇಲ್ವೋ, ಬಂತು ಮನೇಗೆ ಬೇನೆ!..... ನಮ್ಮಪ್ಪ ನಂ ಹಳ್ಳೀಲಿ ನಮ್ಮದು ಹೊಲ-ಗದ್ದೇನ ಮಾರ್ಬಿಟ್ಟು......ನಮ್ಮೂರು ಕಾಲೇಜ್ ಸಾಲ್ದೂಂತ ಅವನ್ನ ಮದ್ರಾಸಿಗೆ ಕಳಿಸ್ದ. . ಇದ್ದ್ ದುಡ್ಡೆಲ್ಲಾ ಖರ್ಚೂನು ಮಾಡ್ದ...... ಎಫ್. ಏ. ನೂ ಫಸ್ಟಾಗಿಮಾಡ್ದ! ಇನ್ ಬಿಡ್ಗಾಸ್ ಬಾಕಿಯಿಲ್ಲ. ಇನ್ನು ಬಿ. ಏ. ಗೆ ದಾರಿ ಏನೂಂತ ಔನು ....'ಇದ್ ಸಾಧಾರಣ ಬುದ್ಧಿ ಅಲ್ಲ......ಇನ್ನ್ ಇವ್ನಿಗೆ ಹ್ಯಾಗಾದ್ರೂ ದುಡ್ಡೊದಗಿಸ್ಕೊಟ್ರೆ ಬಲು ಮುಂದಕ್ಬಂದ್ಬಿಡ್ತಾನೆ ಹುಡ್ಗಾ'ಂತ ನಮ್ಮಮ್ಮನೊಡ್ವೆಗಳ್ನೆಲ್ಲಾ ಮಾರಿ. . ಔನ್ ಬಿ.ಎ, ಖರ್ಚೂ ತೀರ್‍ಸ್ತು. ಅದ್ನೂ ಫಸ್ಟಲ್ ಮಾಡ್ಕೊಂಡು ಮನೇಗ್ಬರುತ್ಲಾನೂವೆ ನಂ ಹುಡ್ಗ ದಿವಾನ್ಗಿರಿವರ್‍ಗೂ ಮುಟ್ಟೋದ್ರಲ್ಲಿ ಸಂದೇಹವೇನೂ ಇಲ್ಲ !......ಕಮಿಷನ್ರು......ಪರೀಕ್ಷೆಗೆ...... ಸಿವಿಲ್ ಸರ್ವಿಸ್ ಪರೀಕ್ಷೆ ಅಂತಾರಲ್ಲಮ್ಮ ಅದು.....ಆ ಪರೀಕ್ಷೇಗೆ ಹೇಗಾದ್ರೂ ಕಳ್ಸೇಬಿಡ್ಬೇಕೂಂತ ... "ಕತ್ತಿಗೆ ಕರೀಮಣಿ ಸಾಕೂ"ಂತ ನಮ್ಮಮ್ಮನ್ ತಾಳೀ ಮಾರಿ . ಪರೀಕ್ಷೆಗೆ ದುಡ್ಕಟ್ಟಿದ ನಮ್ಮಪ್ಪ !.... ಇನ್ನೇನು ಆ ಪ್ಯಾಸ್ನೂಮಾಡ್ದ ....ಕೆಲ್ಸಾನೂ ಸಿಕ್ತು...... ನಮ್ಮನೇಗೂ ಅವನ್ಗೂ ಇದ್ದ ಋಣಾನುಬಂಧಾನೂ ತೀರ್‍ತು !

**ತಾಯಿ —** ತೀರ್‍ತು ಅಂದ್ರೆ ?

**ಕಿಟ್ಟಿ —** ಅಂದ್ರೆ ಏನೇ ? ನಂಜಾತೀವರ್‍ನ......ಅಲ್ಲ..... ಬಡವರ್ನ ....ಬೀದೀಲ್ ನೋಡೋಕ್ಕೂಡ ಅಸಹ್ಯಪಡೋ ದೊಡ್ಮನುಷ್ಯರಲ್ಲಿ ಒಬ್ಬ್ಪಾಪಿ ಬಿಡ್ದೇ ನಮ್ಮಣ್ಣನ್ನ ಮುತ್ಕೊಂಡ್ರು !......ದಿವಾನ್ಗಿರಿಗೆ ದಾಖಲಾಗೋ ಇಷನ್ನ ಅಳಿಯನಾಗಿ ಮಾಡ್ಕೊಳ್ಳೋಕೆ ! ಇನ್ನೇನು ಆ ಜಾತೀಲಿ ಮದ್ವೆಮಾಡ್ಕೊಂಡ !.....ನಮ್ಮಪ್ಪ ಅಮ್ಮನ್ನ ಕೂಡ ಕರೀಲಿಲ್ಲ ಮದ್ವೇಗೆ!......ಅವನಾಯ್ತು! ಅವನ್ ಹೆಂಡ್ತಿ ಮಕ್ಳಾಯ್ತು!

*

....ಅವನ್ ಬಂಗ್ಲೇ ಆಯ್ತು. ..ಸಮ್ಮಮ್ಮ ಹೇಳಿದ್ದಾಗೆ....“ ಇಷ್ಟ್ ಘಟ್ಟಿಗನ್ನ ಹೆತ್ತ್ರಿವೆಲ್ಲಾಂತ ಪಟ್ಟ ಸಂತೋಷಕ್ಕೆ ಗದ್ದೆ ಹೊಲಾನೂ ಮಾರಿ.....ಒಡ್ವೆಗಳನ್ನೂ ಮಾರಿ. .ಬೆಲೆ ಕೊಟ್ಟಾಗಾಯ್ತು; ಇನ್ ನಾವು ದರಿದ್ರರಾದ್ರೂನೂವೆ ದೊಡ್ಡ್ ಮನುಷ್ಯರಿಗೆ ಮಗನ್ ಧಾರೇ ಎರೆದ್ದಾಗೂ ಆಯ್ತು !”

**ತಾಯಿ —** ಸ್ಸರೀ!... .ಬಿಡು ಮಗು ! ಇನ್ನೇನವನ್ ಮಾತು? ....ಏನೋ ಇಷ್ಟು ಕಷ್ಟಾನನುಭವಿಸಿದ್ರೂವೆ . ನಿಂ ತಂದೇಗೆ........ ನೀನಾದ್ರು ..ಇದ್ದೀಯಲ್ಲ! ಧೈರ್ಯವಾಗಿ ನಿನ್ನ ಕೈಲಾದಮಟ್ಟಿಗೂ .... ಮನೇಗೆ ಸಹಾಯಮಾಡ್ತಾ ! ಅದಕ್ಕೇ ನಾನೂ ಸಂಮಗೂ ಹತ್ರ ಹೇಳಿದ್ದು ನಿಸ್ನ ಕರ್‍ಕೊಂಡ್ಬಾ ಅಂತ .. ...

**ಕಿಟ್ಟಿ —** (ವಿಸ್ಮಿತನಾಗಿ) ‘ ಅದಕ್ಕೆ’? ಯಾವ್ದಕ್ಕಮ್ಮಾ ? !

**ತಾಯಿ —** ಈಗ ನೋಡು ಕಿಟ್ಟಿ ನಂ ಹುಡ್ಗ ಈ ಬಾಯ್ ಸ್ಕೌಟಿಗೆ ಸೇರ್‍ದಾಗ್ನಿಂದ ೭ ೭॥.. ೮ ಹೀಗೆ ಹೊತ್ತು ಬಿಟ್ಕೊಂಡ್ ಬ್ರರ್‍ತಾನೆ ಮನೇಗೆ ...ನನಗೋ, ಮಗು ಕತ್ಲಲ್ಲಿ ಒಬ್ನೇ ಬರ್‍ತಾ ನಲ್ಲಾಂತ ಹೆದ್ರಿಕೆ! ಇನ್ನು ಜವಾನನ್ನ ಕಳ್ಸೋಣ ಅಂದ್ರೋ “ ನಾಚಿಗೆ ಆಗುತ್ತೆ ನನಗೆ . ಹಾಸ್ಯಮಾಡ್ತಾರೆ ನನ್ನ ಸ್ನೇಹಿತ್ರು” ಅಂತಾನೆ ಅವ್ನು ಅದಕ್ಕೇ ನಿನ್ಗಿಂತ ದೊಡ್ಡೋನಾಗ್ಲೀ......... ನಂ ಪೇಟೇಲಿ ಮನೇಲಿರೋ ಸ್ನೇಹಿತ . ಯಾರಾದ್ರೂ ಇದ್ರೆ ಅವನ್ಜೊ ತೇಲೇ ನಿತ್ಯಾನೂ ಮನೇಗ್ ಬಾಂತಂದೆ .ಇದ್ ನಿನಗೆ ಹೇಳೋಕೆ ಕರ್‍ಸಿದ್ ನಿನ್ನ ..ಸಮ್ಮತವೇ ನಿನ್ ಮನಸ್ಸಿಗೆ ?...... ...(ಗಟ್ಟಿಯಾಗಿ) ನಾರಾಯಣಾ ! (ಒಳಗಿನಿಂದ ‘ ಅಮ್ಮಾ’ ಎಂದುಕೇಳಿಬರುವುದು) ......ಆ ಟಿಫನ್ನು.... .ಕಾಫೀನೂ ತಕ್ಕೊಂಡ್ಬಾ ಮಕ್ಕಳಿಗೆ ....!

**ಕಿಟ್ಟಿ —** ಸಮ್ಮತವಿಲ್ದೆ ಏನವ್ಮಾ! ದಿನಾ ಬರೋವಾಗ ಮಗೂನ......ನಿಮ್ಮನೇಲಿ ಬಿಟ್ಬಿಟ್ಟು ಹೋಗೋದ್ರಲ್ಲಿ ನನ್ಗೇನೂ ತೊಂದ್ರೆ ಇಲ್ಲ...... ಆದ್ರೆ......ನೀವು......ಯೋಗ್ಯ......ಗೀಗ್ಯ ಅಂತಂದ್ರಲ್ಲ .....ಆ ಸರ್ಕಿಲ್ಲಾ ನಂ ಅಂಗ್ಡೀಲಿಲ್ಲ!......ಅಲ್ಲ.....ಆ ಬಾಬ್ತಿಗೆ ಸೇರ್ದೋ ನಲ್ಲ ನಾನು!..........

**ತಾಯಿ —** (ನಗುತ್ತಾ) ನೀನ್ ಸೇರ್ದಿದ್ರೆ.....ಇನ್ನ್ಯಾರ್ ಸೇರ್ತಾರೆ ಕಿಟ್ಟೀ!?

**ಕಿಟ್ಟಿ —** ಬಂಗ್ಲೇಲಿ ಬೆಳೆದ ಇಸಂಗ್ಳು.................ಅಲ್ಲ.......... ದೊಡ್ಮನುಷ್ಯರ ಮಕ್ಳು ಅವ್ಮಾ.....ನನ್ನ ಬಾಬ್ತೇ ಬೇರೆ.

**ತಾಯಿ —** (ನಗುತ್ತಾ) ನಿನ್ನಬಾಬ್ತು ಅಂದ್ರೆ ಯಾವುದಪ್ಪಾ!

**ಕಿಟ್ಟಿ —** ಪೋಲೀ ಬಾಬ್ತುವ್ಮಾ! ನಿಂ ಹುಡುಗನ ಸಹ್ವಾಸಕ್ಕೆ ನನ್ನ ಸೇರ್ಸೋಕೆ ಮುಂಚೆ ನಿಮಗೆ ತಿಳಿಯ ಬೇಕಾದ ವಿಷ್ಯ ಇದು! ......ನನ್ನ ಹೆಸ್ರೇ (ಮುಖವನ್ನು ಸೂರಿಗೆತ್ತಿ) ಪೋಲೀ ಕಿಟ್ಟೀವ್ಮಾ!!

**ತಾಯಿ —** 'ಪೋಲೀ' ಅಂದ್ರೇನ್ ಕಿಟ್ಟೀ?

**ಕಿಟ್ಟಿ —** (ಹುಬ್ಬುಗಳನ್ನು ರಚಿಸಿ) 'ಪೋಲೀ'ಂದ್ರೆ ಹ್ಯಾಗೆ ಹೇಳೋದವ್ಮಾ.....ಅದು......ಯಾವ ವಿಧದಲ್ಲಿಯೂ......ಹೋಪ್ಲೆಸ್ಸ್ .....ಅಂತಾರಲ್ಲಾ......ಆ ಬಾಬ್ತೂವ್ಮಾ!

**ತಾಯಿ —** (ಎದ್ದುನಿಂತು ಕಿಟ್ಟಿಯ ತಲೆಯಮೇಲೆ ಕೈಯನ್ನಿಟ್ಟು) ಯಾರು ಯಾವ ಬಾಬ್ತೂಂತ್ಲಾದ್ರೂ ಅಂದ್ಕೊಳ್ಳೀ...... ನಮ್ಗೇನ್ ಕಿಟ್ಟೀ? ನಮ್ಮಗೂನ ನಿನ್ನತಮ್ಮನ್ಹಾಗೇ ನೋಡ್ಕೊಂಡು, ಅವ್ನೂ ಧೈರ್ಯಶಾಲಿಯಾಗಿ ಬೆಳ್ದಾಂದ್ರೆ......ಅಷ್ಟೇ ಸಾಕ್‌ನನ್ಗೆ............

(ಪರಿಚಾರಕನು ಫಲಾಹಾರ ಕಾಫಿ ತಂದಿಟ್ಟು ಹೋಗುವನು) ಮಗೂ! ಇಬ್ರೂ ಟಿಫನ್ ತಿಂದು ಕಾಫಿ ಕುಡೀರಿ.....ನಾನೊಳಗ್ಹೋಗ್ತೀನೆ......

[ ಹೋಗುವಳು ]

**ಕಿಟ್ಟಿ** — ಕೇಳ್ದೀನೋ ಲೋ! ಗುಬ್ಬಚ್ಚಿ! ನಿಂಮುದರ್ ನಿನ್ನ ನನ್ನ ಛಾರ್ಜಿಗೆ ಕೊಟ್ಬಿಟ್ಟದ್ದಾ? ..........ಇನ್ಮೇಲೆ ನಾನ್ಹೇಳಿದ್ದು ಕೇಳ್ದಿದ್ರೆ ಎಂಕೆಗಳ್ ಬಗ್ಗಿಸಿಬಿಟ್ಟೇನು? ಹುಷಾರು!

**ಮಗೂ** — ಕಿಟ್ಟಿ ಲೇ! (ತನ್ನ ಬಾಹುವನ್ನು ಸವರುತ್ತಾ) ನನ್ನ ಬೈಸೆಪ್ಸ್ ನಿಂದ್ರಾಂಗೇ ಆಗ್ಲಿ ಸ್ವಲ್ಪ ..............ಆಗ ನೊಡ್ತೇನೆ... ನೀನ್ ಯುವ್ಕೆಗಳ್ ಬಗ್ಗಿಸೋದ್ನ! ..ಆದೆಲ್ಲಾ ಇರ್ಲಿ ......ಈ ಬೋಂಡಾಗಳ್ನ ಬಾಯಿಗ್ಹಾಕ್ಕೊಮ್ಮೋಣ ಬಾ!

**ಕಿಟ್ಟಿ** — ಬೋಂಡ ನಿನ್ನವ್ಯೈಗೂಳ್ಳೀದಲ್ಲ ಕಣೋ!......... ಬೊಂಡಾಗಳಿಗೂ ಬೈಸೆಪ್ಸಿಗೂ ಬಲ್ದೂರ! ..ಬೈಸೆಪ್ಸು ಬಲ್ತೋರೂ **ಬೋಂಡಾ** ತಿಂದ್ರೇನೂ ಬಾಧಕವಿಲ್ಲ!.....(ಕಾಫಿಯನ್ನು ಕುಡಿದು ಸೊಟ್ಟಮೋರೆಯೊಡನೆ) ಯೇನೋ? ಇದು?

**ಮಗೂ** — ಯಾಕೋ?! ಕಾಫೀಗ್ ಸಕ್ರೆ ಸಾಲ್ದೇ?

**ಕಿಟ್ಟಿ** — ಕಾಫೀಗ್ ಸಕ್ರೆ! ಒಳ್ಳೇ ಗುಗ್ಗೂನೋ ನೀನು! ನಾನ್‌ಯಾವಾಗ್ಲೂ **ಸಕ್ರೇಗೆ ಕಾಫಿ ಹಾಕ್ಕೊಂಡು** ಕುಡಿಯೋದೋ!

**ಮಗೂ** — (ನಗುತ್ತ) ಹಾಗಾದ್ರೆ ತರ್ತೀನೆ, ಇರೋ!

[ ನಿಷ್ಕ್ರಮಣ ]

**ಕಿಟ್ಟಿ** — ಸಮ್ಮತವಿಲ್ದೆ ಏನಮ್ಮಾ! ದಿನಾ ಬರೋವಾಗ ಮಗೂನ......ನಿಮ್ಮನೇಲಿ ಬಿಟ್ಬಿಟ್ಟು ಹೋಗೋದ್ರಲ್ಲಿ ನನ್ಗೇನೂ ತೊಂದ್ರೆ ಇಲ್ಲ...... ಆದ್ರೆ......ನೀವು......ಯೋಗ್ಯ......ಗೀಗ್ಯ ಅಂತಂದ್ರಲ್ಲ ......ಆ ಸರ್ಕಿಲ್ಗಾ ನಂ ಅಂಗ್ಡೀಲಿಲ್ಲ!......ಅಲ್ಲ......ಆ ಬಾಬ್ತಿಗೆ ಸೇರ್ದೋ ನಲ್ಲ ನಾನು!..........

**ತಾಯಿ** — (ನಗುತ್ತಾ) ನೀನ್ ಸೇರ್ದಿದ್ರೆ......ಇನ್ನ್ ಯಾರ್ ಸೇರ್ತಾರೆ ಕಿಟ್ಟೀ!?

**ಕಿಟ್ಟಿ** — ಬಂಗ್ಲೇಲಿ ಬೆಳೆದ ಇಸಂಗ್ಳು..................ಅಲ್ಲ.......... ದೊಡ್ಮನುಷ್ಯರ ಮಕ್ಳೂ ಅಮ್ಮಾ......ನನ್ನ ಬಾಬ್ತೇ ಬೇರೆ.

**ತಾಯಿ** — (ನಗುತ್ತಾ) ನಿನ್ನಬಾಬ್ತು ಅಂದ್ರೆ ಯಾವುದಪ್ಪಾ!

**ಕಿಟ್ಟಿ** — ಪೋಲೀ ಬಾಬ್ತಮ್ಮಾ! ನಿಂ ಹುಡುಗನ ಸಹ್ವಾಸಕ್ಕೆ ನನ್ನ ಸೇರ್ಸೋಕೆ ಮುಂಚೆ ನಿಮಗೆ ತಿಳಿಯ ಬೇಕಾದ ವಿಷ್ಯ ಇದು! ......ನನ್ನ ಹೆಸ್ರೇ (ಮುಖವನ್ನು ಸೊಂಗೆತ್ತಿ) ಪೋಲೀ ಕಿಟ್ಟೀಮ್ಮಾ!!

**ತಾಯಿ** — 'ಪೋಲೀ' ಅಂದ್ರೇನ್ ಕಿಟ್ಟೀ?

**ಕಿಟ್ಟಿ** — (ಹುಬ್ಬುಗಳನ್ನು ರಚಿಸಿ) 'ಪೋಲೀ'ಂದ್ರೆ ಹ್ಯಾಗೆ ಹೇಳೋದಮ್ಮಾ......ಅದು......ಯಾವ ವಿಧದಲ್ಲಿಯೂ......ಹೋಪ್ಲೆಸ್ಸ್......ಅಂತಾರಲ್ಲಾ......ಆ ಬಾಬ್ತೂಮ್ಮಾ!

**ತಾಯಿ** — (ಎದ್ದು ನಿಂತು ಕಿಟ್ಟಿಯ ತಲೆಯಮೇಲೆ ಕೈಯನ್ನಿಟ್ಟು) ಯಾರು ಯಾವ ಬಾಬ್ತೂಂತ್ಲಾದ್ರೂ ಅಂದ್ಕೊಳ್ಳೀ...... ನಮ್ಗೇನ್ ಕಿಟ್ಟೀ? ನಮ್ಮಗೂನ ನಿನ್ನತಮ್ಮನ್ಹಾಗೇ ನೋಡ್ಕೊಂಡು, ಅವ್ನೂ ಧೈರ್ಯಶಾಲಿಯಾಗಿ ಬೆಳ್ದಾಂದ್ರೆ......ಅಷ್ಟೇ ಸಾಕ್‌ನನ್ಗೆ..........

(ಪರಿಚಾರಕನು ಫಲಾಹಾರ ಕಾಫಿ ತಂದಿಟ್ಟು ಹೋಗುವನು)ಮಗೂ! ಇಬ್ರೂ ಟಿಫನ್ ತಿಂದು ಕಾಫಿ ಕುಡೀರಿ....ನಾನೊಳಗ್ಹೋಗ್ತೇನೆ......

[ ಹೋಗುವಳು ]

**ಕಿಟ್ಟಿ —** ಕೇಳ್ದೇನೋ ಲೋ! ಗುಬ್ಬಚ್ಚಿ! ನಿಂಮುದರ್ ನಿನ್ನ ನನ್ನ ಛಾರ್ಜಿಗೆ ಕೊಟ್ಬಿಟ್ಟದ್ಹಾ?........... ...ಇನ್ಮೇಲೆ ನಾನ್ಹೇಳಿದ್ದು ಕೇಳ್ದಿದ್ರೆ ಎಂಕೆಗಳ್ ಬಗ್ಗಿ ಸಿಬಿಟ್ಟೇನು? ಹುಷಾರು!

**ಮಗೂ —** ಕಿಟ್ಟಿ ಲೇ! (ತನ್ನ ಬಾಹುವನ್ನು ಸವರುತ್ತಾ) ನನ್ನ ಬೈಸೆಪ್ಸ್ ಸಿಂದ್ರಾ್ಹಗೇ ಆಗ್ಲಿ ಸ್ವಲ್ಪ... ...............ಆಗ ನೊಡ್ತೇನೆ... ನೀನ್ ಯುವ್ಕೆಗಳ್ ಬಗ್ಗಿ ಸೋದ್ನ!......ಅದೆಲ್ಲಾ ಇರ್ಲಿ ......ಈ ಬೋಂಡಾಗಳ್ನ ಬಾಯಿಗ್ಹಾಕ್ಕೊಮ್ಮೋಣ ಬಾ!

**ಕಿಟ್ಟಿ —** ಬೋಂಡ ನಿನ್ನವ್ಯೆಗೊಳ್ಳೇದಲ್ಲ ಕಣೋ!.......... ಬೊಂಡಾಗಳಿಗೂ ಬೈಸೆಪ್ಸಿಗೂ ಬಲ್ದೂರ! ...ಬೈಸೆಪ್ಸು ಬಲ್ತೋರೂ **ಬೋಂಡಾ** ತಿಂದ್ರೇನೂ ಬಾಧಕವಿಲ್ಲ!.....(ಕಾಫಿಯನ್ನು ಕುಡಿದು ಸೊಟ್ಟವೋರೆಯೊಡನೆ) ಯೇನೋ? ಇದು?

**ಮಗೂ —** ಯಾಕೋ?! ಕಾಫೀಗ್ ಸಕ್ರೆ ಸಾಲ್ದೇ?

**ಕಿಟ್ಟಿ —** ಕಾಫೀಗ್ ಸಕ್ರೆ! ಒಳ್ಳೇ ಗುಗ್ಗೂನೋ ನೀನು! ನಾನ್ಯಾವಾಗ್ಲೂ **ಸಕ್ರೇಗೆ ಕಾಫಿ ಹಾಕ್ಕೊಂಡು** ಕುಡಿಯೋದೋ!

**ಮಗೂ —** (ನಗುತ್ತ) ಹಾಗಾದ್ರೆ ತರ್ತೇನೆ, ಇರೋ!

[ ನಿಷ್ಕ್ರಮಣ ]

**ಕಿಟ್ಟಿ —** (ಸುತ್ತ ಮುತ್ತಲೂ ನೋಡುತ್ತಾ) **ಮಿಕ್ಕೋವ್ರು ಈ ಮನೇಲಿ ಹ್ಯಾಗಿದ್ರೂನೂ.. ಇವರಮ್ಮ ನಮ್ಮ ಜಾತೀನೆ ನಮ್ಮಮ್ಮನ್ಹಾಗೇನೇ !**

[ ಮುಖವನ್ನು ಮೇಜಿನಮೇಲೊರಗಿಸುವನು ]

[ ಘ ರ ದೆ ಬೀ ಳು ವು ದು ]

---

## ದೃ ಶ್ಯ ೭.

[ ಸ್ಥಳ — ಮೈದಾನ ]

[ರಾಘುವಿನ ದಳದವರು ಕೋಟುಗಳಿಲ್ಲದೆ ಕುಸ್ತಿ, ಓಟ ಮುಂತಾದ ಪಂದ್ಯ ಪರೀಕ್ಷೆಗೆ ತಯಾರಾಗಿರುವರು.]

**ಕಿಟ್ಟಿ —** ಲ್ರೋ! ಹರಕಲ್ ಬನಿಯನ್ ಹಾಕ್ಕೊಂಡಿದ್ರೆ.. .. ಬಡ್ಕೊಂಡಾರೇನೋ, ಶುಕ್ರಾಚಾರ್ರು? ಅಲ್ಲ ....ಎಸ್ಸೆಮ್ಮ್ಮ?

**ಅಪ್ಪೂ —** ಏನೂ ಇಲ್ಲಾ ಕಾಣೋ--ಯಾಕೋ. ?

**ಕಿಟ್ಟಿ —** ಅಯ್ಯೋ! ಮೊದಲೇ ಡ್ರಿಲ್‌ನಲ್ಲಿ ನಿನ್‌ಪರಾಯಿ ಹೀಗಿದೆ. .ಕೋಟು ಹಾಗಿದೆ.....ಗುಂಡಿ ಹಾಕಿದ್ ಸರಿಯಿಲ್ಲ ಅಂದೋರು......ಈ ಹರಕಲ್ ಬನಿಯ್ನ ನೋಡಿ ಬಡ್ಕೊಂಡಾರೋ ಏನೋಂತ ಕೇಳಿದ್ದು.. .ಆದ್ರೆ ಬಡ್ಕೊಂಡ್ರೆ ತಾನೇ ಏನು?....

ಬನಿಯನ್ನು ಹೇಗಾದ್ರೂ ಕೋಟ್‌ಮುಚ್ಕೊ ಬಾಬ್ತೂಂತ ಹೇಳ್ಕೋ ತೇನೆ—ಅದಕ್ಕೂ ಗೊಣಗುಟ್ಕೊಂಡ್ರೆ.....ಕುಸ್ತೀಲಿ ..... ಕಿತ್ತು ...... ಹರ್ದ್ ಹೋದೀತೂಂತ.....ನನ್ ರೇಷ್ಮೆ ಷರ್ಟ್ ....ಜರ್ತಾರಿ ಬನಿ ಯನ್ನು ಇವ್ರುಗಳ್ಗೆಲ್ಲಾ ಮನೇ ಬೆಳ್ಗೇ ಪೆಟ್ಗೇಲಿಟ್ಟು.....ಚಿನ್ನದ ಬೀಗಾ ಹಾಕಿ, . . ಈ ಗಾಳೀ ತೂರೋ ಬಾಬ್ತು ಹಾಕ್ಕೊಂಬಂದಿ ಥೇನೇಂದ್ರಾಯ್ತು ! ಓಹೋ ! ಬಂದ್ಬಿಡ್ತು ಸುಲೋಚನಾ !

[ ಪ್ರವೇಶ — ಸ್ಕೌಟು ಮಾಸ್ಟರು ]

**ಸ್ಕೌಟು ಮಾಸ್ಟರು —** ಫಾಲ್ಇನ್ (Fall in) ! (ಎಲ್ಲರೂ ಸಾಲಾಗಿ ನಿಲ್ಲುವರು) ಬ್ರಿಗೇಡ್ ಸ್ಪೋರ್ಟ್ಸ್ (Brigade Sports) ದಿನ ರೆಸ್ಲಿಂಗ್ ಕಾಂಪೆಟಿಷನ್ನಿಗೆ (Wrestling Competition) ನಂ ಪೆಟ್ರೋಲ್ನಿಂದ ಯಾರು ಹೋಗೋದು ಅಂಬೋದ್ನ ಡಿಸೈಡ್ (decide) ಮಾಡ್ಬಿಡೋಣ ಇವೊತ್ತು ; Eleven to fourteen years of age, ಎಷ್ಟು ಜನ ಇದ್ದೀರಿ, ಪೆಟ್ರೋಲ್ನಲ್ಲಿ ?

**ಮಗೂ, ಶಾಮಿ, ರಾಮು —** ನಾವು ಸಾರ್ !......

**ಸ್ಕೌಟು ಮಾಸ್ಟರ್ —** Fourteen to Sixteen, ಎಷ್ಟು ಜನ ?

**ಅಪ್ಪೂ, ವಾಸು —** ನಾವಿಬ್ರು ಸಾರ್ !

**ಸ್ಕೌಟು ಮಾಸ್ಟರ್ —** ಕ್ರಿಷ್ಟ್ರಾವ್ ! ನಿನ್ಗೆಷ್ಟು ವಯಸ್ಸು ?

**ಕಿಟ್ಟಿ —** 18, ಸಾರ್ !

**ಸ್ಕ್ಯಾಟು ಮಾಸ್ಟರ್ —** ಹಾಗಾಪ್ರೆ, ನೀನೂ ರಾಘು ಒಂದು ಬ್ಯಾಚೂ!......(Batchoo) ...(ಎಲ್ಲರಿಗೂ) ಈ ಮೂರು ಬ್ಯಾಚ್ನಲ್ಲೂ ಒಂದೊಂದ್ರಲ್ಲೊ ಬ್ಬೊಬ್ಬನ್ನ ಡಿಸ್ಪೈಡ್ ಮಾಡಿ ವಿನ್ನರ್ಸ್ಸ್ ಸ್ಪೋರ್ಟ್ಸ್ ದಿನ ಹಾಜರಾಗ್ಬೇಕು ...... (ರಾಘುವನ್ನು ಕುರಿತು) ಇನ್ ಟೆನ್ ಮಿನಿಟ್ಸ್‌ನಲ್ಲಿ ಬರುತ್ತೇನೆ....ಅಷ್ರಲ್ಲೀ ರೆಸ್ಲಿಂಗಿಗೆಲ್ಲಾ ಅರ್ರೇಂಜ್ ಮಾಡಿರು.

[ ನಿಷ್ಕ್ರಮಣ ]

**ಕಿಟ್ಟಿ —** ರಾಘು ಲೋ! ನಾನ್ ನಿನ್ನೊತೇಲಿ ಕುಸ್ತೀನೇ?

**ರಾಘು —** (ಸಿಡುಕಾಗಿ) ಹೌದೋ!

**ಕಿಟ್ಟಿ —** ಹಾಗಾದರೆ ಕಾಳ್ಕಾದೇವೀಗಿಥೇ ಈವತ್ತು ಒಂದ್ಕೋಳೀ ಬಲೀ?!

**ರಾಘು —** ಯಾವ ಕೋಳೀಯೋ?

**ಕಿಟ್ಟಿ —** ಅಲ್ಲ! ಜಂಭದ್ಕೋಳೀಂತದೊಂದ್ ಜಾತಿ!

[ ರಾಘುವು ಕಿಟ್ಟಿಯನ್ನು ಬಿಟ್ಟು ಮಿಕ್ಕವರ ಹತ್ತಿರಕ್ಕೆ ಹೋಗಿ ]

**ರಾಘು —** ಲ್ರೋ!..... ಜೋಡಿಗ್ಳೆಲ್ಲಾ ತಯಾರಾಗಿ ನಿಲ್ರೋ ಎಸ್ಸೆಂ ಬರೋಷ್ಟ್ ಹೊತ್ಗೆ!

**ಅಪ್ಪೂ —** ನಾವ್ ನೋಡ್ಕೋತೇವೋ ನಂ ಕೆಲ್ಸ... ಮೊದೂಲ್ಕುಸ್ತಿ ಯಾರ್ದು?.... ಕಿಟ್ಟೀದೆ......ಅಲ್ಲಾ......ನಿಂದೇ?

[ ರಾಘುವು ಉತ್ತರ ಕೊಡದಿರುವನು—ಪ್ರವೇಶ—ಸ್ಕ್ಯಾಟುಮಾಸ್ಟರು ]

**ಸ್ಕೌಟು ಮಾಸ್ಟರ್ —** (ಪಟ್ಟಿಯಿಂದೋದುತ್ತಾ) ...... ರಾಘವೇಂದ್ರರಾವ್ ! ಕ್ರಿಷ್ಣಾರಾವ್ ! ಸ್ಟಾರ್ಟಾಫ್ ! (Start off) !

**ಕಿಟ್ಟಿ —** ಹಾಗಾದರೆ ಷುರು ಮಾಡ್ಲೇ ಸಾರ್ ?

[ಕಿಟ್ಟಿಯು ಷರಾಯನ್ನು ತೊಡೆಯುವರೆಗೂ ಎತ್ತಿ ಸಿಕ್ಕಿಸಿಕೊಂಡು, ಗರಡಿ ಪೈಲ್ವಾನನಂತೆ ತೋಳು ತೊಡೆಗಳನ್ನು ತಟ್ಟುತ್ತಾ, ಬಗ್ಗಿ ಬಲಗೈಯಿಂದ ನೆಲದ ಮಣ್ಣನ್ನು ತೆಗೆದು ಎದೆಗೆ ಬಳಿದುಕೊಂಡು, ಮತ್ತೆ ತೊಡೆಯನ್ನು ತಟ್ಟುತ್ತಾ—'ಯಾ ಮೇರೆ ಮೌಲಾ' ಅನ್ನುತ್ತಾ ರಾಘುವಿನ ಕಡೆ ಹೆಜ್ಜೆ ಹಾಕುವನು.]

**ಸ್ಕೌಟು ಮಾಸ್ಟರ್ —** ಇದೇನೋ ಇದು ನಿನ್ ಕುಣ್ದಾಟ ......ವೈಗ್ಯಾಕೋ ಮಣ್ತೂರ್ಕೊಂಡೇ ?.... ಅದೇನೋ ಜಪಮಾಡ್ತಿರೋದ್ ನೀನು ?

**ಕಿಟ್ಟಿ —** ಅದು ನಮ್ಮ ಅಖಾಡಾದ ಆದತ್ತು ಸಾರ್ ....ಕುಸ್ತೀಗುತ್ರಾಯ್ಸೋವಾಗ, ಲಾಲ್ಮಟ್ಟೀನ ಛಾತೀಗ್ ಲಗಾಯ್ಸಿಕೊಂಡು..... ಮೌಲಾಲೀ ಹೆಸರ್ಹೇಳಿ ....ಖಲೀಫರ್ನ ಯಾದ್ ಮಾಡ್ಕೊಂಡ್ರೆ... ಒಳ್ಳೇ ತಾಕ್ಹತ್ ಬರತ್ತೇ ಸಾರ್ ...ತಾಕ್ಹತ್ತು ! ಇದು ಆದತ್ತು ಸಾರ್.... ಅಖಾಡಾದಲ್ಲಿ !

**ಸ್ಕೌಟು ಮಾಸ್ಟರ್ —** ನಿನ್ನಾಯ್ರ್ ಸಾಕಿದ್ರೋ ? ..ಎಲ್ಲಿ ಬೆಳದ್ಯೋ ?......ಚೆನ್ನಾಗಿದೆ ! ಒಳ್ಳೇ ತುಂಟರ ಪುಂಡ ಬಂದ್ ಸೇರ್ಕೊಂಡ ಬ್ರಿಗೇಡ್ಗೆ ! ...ಏನ್ ಭಾಷೇನೋ ?.....ಕಾಲ್ಪಾಲು ಕನ್ನಡ......? !

**ಕಿಟ್ಟಿ —** ಮುಕ್ಕಾಲ್ ಮುಸಲ್ಮಾನಿ ಸಾರ್ ! ತುರುಕ್ರು ಜಾಸ್ತಿ ಸಾರ್, ನಂ ತಾಲೀಂನಲ್ಲಿ......ನಾನ್ ನಾಲಕ್ಕ್ ವರ್ಷದಿಂದ ಸಾರ್, ನಂ ಬಸ್ತೀಲಿ......

**ಸ್ಕೌಟು ಮಾಸ್ಟರ್ —** ಸಾಕೋ! ನಿನ್ನ ವಿಚಿತ್ರ ಚರಿತ್ರೆ .. ಕುಸ್ತಿ ಮಾಡು .. !

[ಕಿಟ್ಟಿಯು "ಹನುಮಂತ ಹೆಜ್ಜೆ"ಯನ್ನು ಹಾಕುತ್ತಾ, ರಾಘು ವಿನ ಕಡೆ ನಡೆಯುವನು. ರಾಘುವು ಬೆಚ್ಚಿ ಬಿದ್ದು ನಿಲ್ಲುವನು.]

**ಸ್ಕೌಟು ಮಾಸ್ಟರ್ —** ಏನ್ ಯೋಚಿಸ್ತಿಧೀಯೋ ಕುಸ್ತಿ ಮಾಡೋದ್ಬಿಟ್ಟು ?

**ರಾಘು —** ಯೋಚ್ನೆ ಯೇನೂ ಇಲ್ಲ ಸಾರ್! ಇವನ್ನ ಕುಣ್ದಾಟ ನನಗರ್ಥವಾಗೋದಿಲ್ಲ ಸಾರ್ !

**ಕಿಟ್ಟಿ —** (ರಾಘುವಿಗೆ) ಅರ್ಥವಾಗ್ದಿದ್ರೆ, ತರ್ಜುಮೆ ಮಾಡಿ ಹೇಳ್ತೀನೆ .ಇಲ್ಲಿ ಬಾ . .

[ರಾಘುವು ಮುಂದಕ್ಕೆ ಬರುವನು. ಇಬ್ಬರೂ ಹಿಡಿದುಕೊಂಡು ಕ್ಷಣಮಾತ್ರ ಜಗ್ಗುವರು. ಕಿಟ್ಟಿಯು ಒಂದು "ಟಾಂಗ್"ನ್ನು ಕೊಟ್ಟು ರಾಘುವನ್ನು ಬೀಸಿ ಕೆಡಹುವನು. ರಾಘುವು ಎದೆ ಮೇಲಾ ಗದೇ ಅಧೋ ಮುಖವಾಗಿ ತಿರುಗಿಕೊಂಡು ಬೀಳುವನು.]

**ಕಿಟ್ಟಿ —** (ನಿಂತಿದ್ದ ಹಾಗೇ) ಇದೇನ್ಕುಷ್ತೀ ಸಾರ್!

**ಸ್ಕೌಟು ಮಾಸ್ಟರ್ —** ಯಾಕೋ?

**ಕಿಟ್ಟಿ —** ನನ್ಗೆ ಸಮಜೋಡೀ ಅಲ್ಲಾ ಸಾರ್ ಈ ಜಂಬ ದ್ಕೋ.....ಅಲ್ಲ.....ಈ ರಾಘು.....!

**ಸ್ಕೌಟು ಮಾಸ್ಟರ್ —** ಏನೋ? ಒಂದು ಟಾಂಗ್ ಕೊಟ್ಟು ಅವನು ಬಿದ್ದಾ ಕ್ಷಣವೇ ಇಷ್ಟು ಜಂಭಾನೇನೋ? ಮಾಡೋ ಕುಸ್ತಿ !......

**ಕಿಟ್ಟಿ —** ಜಂಭ್ವೇನ್ ಸಾರ್! ...ಬರೀ ಜಿಸ್ಸವಿಮ್ಮನ ಮಾತು ನಾನೆತ್ತಿದ್ದು ಸಾರ್! (ರಾಘುವಿಗೆ) ಬಾರೋ! ಎದ್ಬಾರೋ! .. ಇಲ್ಲಾ, ...ಪೀಟ್. ಕೊಡ್ತೀಯಾ? (ರಾಘುವು ಥಟ್ಟನೆದ್ದು ಪುನಃ ಕಿಟ್ಟಿಯನ್ನೆದುರಿಸಲು ಒಂದು ಕ್ಷಣದ ಜಗ್ಗಾಟದಲ್ಲಿ ಕಿಟ್ಟಿಯು ರಾಘು ವನ್ನು ತನ್ನ ಬೆನ್ನಿಗೆ ಏರಿಸಿ) ಸಾರ್! ಈ 'ಧೋಬಿ ಪಟಿಕ್' ಅಂತಾ ರ್ರ್ನೋಡಿ ಸಾರ್!. ಅದ್ ತೋರಿಸ್ತೇನೆ! [ಅಗಸರು ಬಟ್ಟೆಯನ್ನು ಬಂಡೆಯ ಮೇಲೆ ಒಗೆಯುವಂತೆ ರಾಘುವನ್ನು ಹಿಂದಿನಿಂದ ಎತ್ತಿ ಮುಂದೊಗೆಯುವನು. ರಾಘುವು ಅಂಗಾತನಾಗಿ ಬೀಳುವನು.]

**ಸ್ಕೌಟು ಮಾಸ್ಟರ್ —** (ಬರೆದುಕೊಳ್ಳುತ್ತಾ) "First fall to Krishna Rao!"..ಒಂದೈದು ನಿಮಿಷ ಸುಧಾರಿ ಸ್ಕೊಳ್ಳಿ! ಇದೋ ಬಂದೆ

[ಮಿಕ್ಕ ಸ್ಕೌಟುಗಳನ್ನು ಬೇರೆ ಬೇರೆ ಕಡೆ ಕರೆದುಕೊಂಡು ಹೋಗಿ ಮಾತನಾಡಲುಪಕ್ರಮಿಸುವನು].

**ಕಿಟ್ಟಿ —** (ಇನ್ನೂ ಬಿದ್ದಿರುವ ರಾಘುವನ್ನು, ಕೈ ಕೊಟ್ಟುಎಳೆದು ನಿಲ್ಲಿಸಿ) ಯಾಕೋ? ಏಟ್‌ಗೀಟ್ ತಗಲ್ತೇನೊ? (ಅವನು ಬಿದ್ದ ಸ್ಥಳವನ್ನು ಕಾಲಿನಿಂದ ಒದ್ದು ನೋಡಿ) ನೆಲ ನರ್ಮಿಯಾಗಿದೆ ಯಲ್ಲೋ! (ರಾಘುವಿನ ಬೆನ್ನಿಗೆ ಮಣ್ಣನ್ನು ತಟ್ಟುತ್ತಾ) ಇನ್ನೂ ಸ್ವಲ್ಪ ಸುಧಾರಿಸ್ಕೋತೀಯಾ?......ಇಲ್ಲ ಷುರು ಮಾಡೋಣ್ವೋ ತಿರ್‌ಗೂ? (ರಾಘುವು ಪ್ರತ್ಯುತ್ತರ ಕೊಡದೇ ಇರಲು) ನನಗೇನೂ ನಿನ್ಮೇಲೆ ಜಿದ್ದಿಲ್ಲ ಕಣೋ.... ಬೇಕಾದರೆ ಇನ್ನೊಂದು "ಲಡತ್" ನಾಳೆ ಇಟ್ಕೊಳ್ಳೋಣ .....ಹೂಂ...?

**ರಾಘು —** ಅದೆಲ್ಲಾ ಎಸ್ಸೆಂ ಕೇಳೋದಿಲ್ಲ ಕಣೋ!.....ಅದೂ ಅಲ್ದೆ ಯಾವಾಗಿಟ್ಕೊಂಡ್ರೆ ತಾನೇ ಏನೋ? ಶನಿ!.....

**ಕಿಟ್ಟಿ** — ರಿಸಲ್ಟ್ ಹೇಳ್ತೀಯಾ? ಆದ್ರೆ!.....ನಿನಗಿಷ್ಟ ಇಲ್ದಿದ್ರೇಪ್ಪಾ, ನಿನ್ನ್‌ನೊಂಟಾ ಸ್ವಲ್ಪ ಸಡಿಲ ಅಂತ ಹೇಳ್ತೀನೆ..... ಎಸ್ಸೆಂ ಹತ್ರ.....ಆ ಕ ಡಿಷನ್ನೊ....

**ರಾಘು** — ಕ ಡಿಷನ್ನೇನೋ?

**ಕಿಟ್ಟಿ** — ಏನೂ ಇಲ್ಲ!.....ದಿನಾ ಎರಡ್ ಜೋಬ್ತುಂಬಾ ತುಂಬ್ಕೊಂಬರ್ತೀಯಲ್ಲಾ ತಿಂಡೀನ.........?........

**ಸ್ಕೌಟು ಮಾಸ್ಟರ್** — (ಪ್ರವೇಶಿಸಿ) ಏನೋ ರಾಘು? ರೆಡಿಯೋ ನೆಕ್ಸ್ಟ ಬೌಟಿಗೆ (Next bout) ..?

**ರಾಘು** — (ಭ್ರಮಿತನಾಗಿ) ಹೂಂ, ಸಾರ್!

**ಕಿಟ್ಟಿ** — (ಪುನಃ ಹೋರಾಡುವಾಗ ಕೆಳಗೆ ಬಿದ್ದ ರಾಘುವಿಗೆ "ಕೋನಿ"ಯನ್ನು ಹಾಕಿ ತಿರುಗಿಸುತ್ತಾ) ಆಗ ಹೇಳ್ತಿದ್ದದ್ನುಗಿಸಿ ಬಿಡ್ತೀನೋ ಈಗ....ಆ ಎರಡ್‌ಜೋಬ್ ತಿಂಡೀನೂ ನೀನೇ ತಿನ್ನ್ತೀಯಾ??

**ರಾಘು** — ಇನ್ಮೇಲೆಲ್ಲಿರ್ಗೂ ಕೊಡ್ತೀನೆ, ಬಿಡೋ!

**ಕಿಟ್ಟಿ** — (ಪಟ್ಟನ್ನು ಭದ್ರಿಸುತ್ತಾ) ಎಲ್ಲಾರ ಮಾತ್ ಕಟ್ಕೊಂಡ್ ನನಿಗ್ಯಾಕೇ....ನಿನಿಗ್ಯಾಕೇ? .ಫಲಾನ.....ಒಬ್ನಿಗೇ! ..... ನನ್ನೋಡು! .... ಒಬ್ನಿಗೇ! ...... ಯಾಕೇಂದ್ರೆ.....ತಿಂಡೀಗ್ ತಿರುಪೆ ಎತ್ತೋವ್ನಲ್ಲ ನಾನು!.....ಆದ್ರೂನೂವೆ.....ನಿನ್ನ ಹತ್ರಿಧಾನ್ ನೋಡು ಒಬ್ಬ.....ಅವನ್ಗೆ.....ಕೊಡ್ತೀಯಾ.....ಸತ್ಯವಾಗಿ?

**ರಾಘು** — ಹೂಂ ಕಣೋ!

**ಕಿಟ್ಟಿ** — (ಸ್ಕ್ಯಾಟು ಮಾಸ್ಟರನ್ನು ಕುರಿತು) ಕೋನೀಗ್ ಸಿಕ್ಕೊಂಡಿಧಾನೆ ಸಾರ್......ಫಿರಾಯ್ಸಿ "ಪೀಟ್ಮಾಡೋಣಾ"ಂದ್ರೆ..... ಮೊದಲ್ಲಡಕ್ನಲ್ಲಿ ಸೊಂಟ ಏನೋ ನೋಯತ್ತೇಂತ ಹೇಳ್ತಿದ್ದ ಸಾರ್! ಪಾಪ!.....ನನ್ಗೇನೋ, ಫಿರಾಯ್ಸಿದ್ರೆ.... ನೋವ್‌ಗೀವ್ ಜಾಸ್ತಿಯಾಗ್ಬಿಟ್ಟೇತೂಂತ ಸಾರ್.....ಪಾಪ! ....ನಂ ರಾಘು ಸಾರ್!

**ಸ್ಕ್ಯಾಟು ಮಾಸ್ಟರ್** — That's the proper Scout spirit, my boy! ಏನ್ ಕುಸ್ತೀ ....ಸ್ಪೋರ್ಟ್ಸ್‌ನಲ್ಲಿ ಎಷ್ಟು ರೈವಲ್ರಿ (rivalry) ಇದ್ರೂ.....ಫ್ರೆಂಡ್ಷಿ.....ಬ್ರದರ್ಲಿ ರಿಗಾರ್ಡ್ಸ್.... ಬಿಡ್ಬಾರ್ದು!

**ಕಿಟ್ಟಿ** — ಬಲು ಫ್ರೆಂಡ್ಸಿ ಸಾರ್ ನಾವು......ಅಲ್ವೇ ರಾಘೂ? ಏನ್ ತಿಂಡಿ ತಂದ್ರೂ ನನ್ಗರ್ಧ ಕೊಟ್ಬಿಟ್ಟೀ ತಿನ್ನೋದವ್ನು!....ಅಲ್ವೇ ರಾಘು?

**ಸ್ಕ್ಯಾಟು ಮಾಸ್ಟರ್** — ಸಾಕೇಳ್ರಿ!.....You are too strong for him! ಕಿಟ್ಟೇನ್ನೇ ವಿನ್ನರಾಗಿ ಬರ್ಕೊಳ್ಳೀ ರಾಘು?

**ರಾಘು** — ಹೂಂ......ಸಾರ್!

**ಸ್ಕ್ಯಾಟ್ ಮಾಸ್ಟರ್** — That's the spirit, my boy!

[ ಕಿಟ್ಟಿಯ ಹೆಸರನ್ನು ಪಟ್ಟಿಯಲ್ಲಿ ಬರೆದುಕೊಳ್ಳುವನು. ]

[ ಅಪ್ಪುವಿಗೂ ವಾಸುವಿಗೂ ಕುಸ್ತಿಯಾಗುವುದು. ಮೊದಲನೆಯ ಕುಸ್ತಿಯಲ್ಲಿ ಅಪ್ಪುವು ಸೋಲುವನು. ]

**ಸ್ಕ್ಯಾಟು ಮಾಸ್ಟರ್** — (ಬರೆದುಕೊಳ್ಳುತ್ತಾ) First fall to Vasudeva Rao..........ಏನಪ್ಪೂ? ಟೈಮಾಗ್ತಾ

ಬಂತು ..ವಾಸೂನೇ ದಾಖಲ್ಮಾಡಿಕೊಳ್ಳೋ? ಇಲ್ಲ ಇನ್ನೊಂದ್ ಬಾಟು ಟ್ರೈ (Try) ಮಾಡ್ತೀಯೋ?

[ ಅಪ್ಪುವು ಸಂದೇಹಪಡುವನು ]

**ಕಿಟ್ಟಿ** — ಬಿಡೋದಿಲ್ಲಾನ್ನೋ, ಬೇಗೈರತ್!......ಮೊದಲ್ ಸರ್ತಿ ಬಿದ್ದದ್ದು ಹುಲ್ಲು ಫ್ಲಿಸ್ರಾಯ್ಸಿದ್ದು ಕಣೋ!........(ಒಂದು ಮೂಲೆಗೆಳೆದುಕೊಂಡು ಹೋಗಿ) ನಿನ್ಗಿಂತ ಒಂದೂವರೆ ಮಾರುದ್ದ ಇಧಾನವ್ನು!, ನಿನಗೆ ಬೇಕಾದ್ದೊಂದೇ ಕವಾಲು ...'ಡುಬ್ಬು'! ಅರ್ಥ್ವಾಯ್ತೇನೋ? ತೋಳಿಗ್ ತೋಳ್ ಕಟಾಯ್ಸೋವಾಗ ಥಟ್ಟನ್ ಕೈಬಿಟ್ಟು .ಅವನ್ ಕಾಲ್‌ಮಧ್ಯೆ ಮುಳ್ಗಿ .ಅದೇ 'ಡುಬ್ಬು' ...ಮುಳುಗಿದ್ದಾಗೆ ಎತ್ತಾಕು ..ಇದೇ 'ಡುಬಾಯ್ಸೋದೂ'ಂತ! (ಮಾತಿಗೆ ಸರಿಯಾಗಿ ಅಪ್ಪುವಿನ ಎರಡು ಕಾಲುಗಳ ಮಧ್ಯೆ ನುಗ್ಗಿ ಎತ್ತಿಹಾಕಿ. ..ಬಿದ್ದ ಅಪ್ಪುವನ್ನು ತಿರುಗಿ ಎತ್ತಿ ನಿಲ್ಲಿಸಿ) ಅರ್ಥವಾಯ್ತೇನೋ?

**ಅಪ್ಪೂ** — ಹೂನೋ!.....ಟ್ರೈ ಮಾಡ್ತೇನೆ!

**ಕಿಟ್ಟಿ** — ಆ ಶುಕ್ರಾಚಾರಿ ಹೇಳಿದ್ದಾಗೇ, 'That's the proper spirit my boy!' ...ಅಲ್ದೆ ಹಂಚಿ ಕಡ್ಡಿಗಳಂಟ್ಸೆ ನಿಲ್ಲಿಸಿದ್ದಾಗಿರೋ ಆ ಜಾಡರ್‌ಹುಳಕ್ಕೆ ಒಂದು 'ದಂ' ನಲ್ಲೇ ಹೆದರ್ಕೊಂಡ್ ಹೋಗೋದೇನೋ?

**ಸ್ಕೌಟು ಮಾಸ್ಟರ್** — (ಗಟ್ಟಿಯಾಗಿ) ಅವನ್ನ ಏನ್ ಕುಕ್ತಿದೀಯೋ? ಕುಸ್ತಿ ಮಾಡಿದವನ್ನ, ಪಾಪ!?

**ಕಿಟ್ಟಿ** — ಕವಾಲ್ ಸಿಕ್ತಾಯ್ಸ್ತಿದ್ದೆ ಸಾರ್!.....ನನ್ 'ಷಾಗಿರ್ದ್' ಸಾರ್! ಅವ್ನು.....ಅಲ್ಲ......ನನ್ ಫ್ರೆಂಡು......(ಮುಂದಕ್ಕೆ

ಬರುತ್ತಾ) ಮೆಸ್ಸೇಜ್ ಕೊಟ್ಟಿದಾನೆ ಸಾರ್! .ಕೊನೇವರ್ಗೂ ಮಾಡೇಮಾಡ್ತಾನಂತೆ ಸಾರ್! ಕುಸ್ತಿ .ಅಪ್ಪು .ಬುಲ್ಡಾಗೂ ಸಾರ್......ನೀವು ಅದೆಂಥಾದ್ದೋ 'Spirit, my boy' ಅಂದ್ರಲ್ಲ ಆ ಬಾಬ್ತು ಸಾರ್ ಅಪ್ಪೂನು, ನಮ್ಮೆಲ್ಲಾರ ಹಾಗೇ....

**ಸ್ಕೌಟು ಮಾಸ್ಟರ್ —** Start off, then !

[ಅಪ್ಪೂವೂ, ವಾಸುವೂ ಮತ್ತೆ ತಿರುಗಿ ಹೋರಾಡುವರು. ಅಪ್ಪುವು ಕಿಟ್ಟಿಯು ಹೇಳಿಕೊಟ್ಟಂತೆ, ಥಟ್ಟನೆ ವಾಸುವಿನ ತೋಳು ಗಳನ್ನು ಬಿಟ್ಟು, ಅವನ ತೊಡೆಗಳ ಮಧ್ಯೆ ನುಗ್ಗಿ ಅವನನ್ನು ಎತ್ತಿ ಹಾಕುವನು.]

**ಸ್ಕೌಟು ಮಾಸ್ಟರ್ —** (ಬರೆಯುತ್ತಾ) Second fall to Appu Rao .one fall each good fightoo. Now for the third bout. ಇಲ್ಲಾ ರೆಸ್ಟ್ ತಕೋ ತೀರೋ ?

**ಕಿಟ್ಟಿ —** ಬೇಡಾ ನ್ನೋ! .....ನಿನ್ನ್ ರೋದದೊಂದೇ ಕಮಾಲು!.. .ಅವ್ನಿಗೆ ಜ್ಞಾನೋದಯವಾಗೋದಕ್ಕುಂಚೆ ತೀರಿಸ್ಬಿಡ್ಬೇಕು ಅವನ್ ಸಾಲಾನಾ....

**ಅಪ್ಪೂ —** ಹೂಂ ನೋ! . (ಸ್ಕೌಟ್ ಮಾಸ್ಟರಿಗೆ) ನಾನ್ ರೆಡಿ ಸಾರ್!

**ಸ್ಕೌಟು ಮಾಸ್ಟರ್ —** Start off, then !

[ಅರೆ ಮನಸ್ಸಿನಿಂದ ಎದುರು ಬರುತ್ತಿರುವ ವಾಸುವಿನ ಭುಜ ಗಳನ್ನು ಹಿಡಿದು ಬಗ್ಗಿಸಿ, ಥಟ್ಟನೆ ಬಿಟ್ಟು, ಹಿಂದಿನಂತೆಯೇ ಅವ ನನ್ನು ಎತ್ತಿ ಹಾಕುವನು.]

**ಸ್ಕೌಟು ಮಾಸ್ಟರ್ —** (ಬರೆಯುತ್ತಾ) 'Third fall and match to Appu Rao' ..... ಪೆನ್ಸಿಲನ್ನು ಕಿವಿಗೆ ಸಿಕ್ಕಿಸಿ ಕೊಳ್ಳುತ್ತಾ) Now for the last lot......(ಮಗು, ಶಾಮಿ, ರಾಮುವನ್ನು ಗಮನಿಸಿ)......ಮೂರ್‌ಜನ ಇಧೀರಲ್ರೋ ....ಹ್ಯಾಗೆ ಅರ್ರೇಂಜ್ ಮಾಡ್ಕೊಳ್ತೀರೋ ?

**ರಾಘು —** ಇಬ್ರೇ ಸಾರ್ ! ಇಬ್ರೂ ಫೋರ್ಟೀನು (fourteen).. ಮಗೂಗೆ ಈಗ್ತಾನೆ ಹನ್ನೊಂದಾಯ್ತು ವಯಸ್ಸು ... ಅವ್ನಿಗೆ ಛಾನ್ಸಿಲ್ಲಾ.... ಇನ್ನು ಏಟ್ಬೇರೆ.

**ಕಿಟ್ಟಿ —** (ರಾಘುವಿಗೆ) ಒಳ್ಳೇ ಲೀಡರೋ ನೀನು ! ನಿನ್ನ ಪೆಟ್ರೋಲ್ಗಿರೋ ಅಲ್ಪಸ್ವಲ್ಪ ಗಂಡಸ್ತನಾನ್ನ.....ಘಬರಾಯ್ಸಿ ಓಡಿಸ್ಬಿಡು....(ಮಗುವಿಗೆ) ಲೋ ! ..ಆ ಹುಳುಗಳಿಗೆ ಹೆದರ್ಕೊಂಡು.... ಕುಸ್ತೀನಾ.. ..ನೀನ್ಯಾನಾ ತಪ್ಪಿಸಿಕೊಂಡ್ಯೋ.....ನಿನಿಗ್ ನನ್ನ ದೋಸ್ತಿ ಹೋಗೋದಲ್ದೆ.....ನಿನ್ನ ಯಂಕೆಗಳ್ ಬಗ್ಗಿ.....ನಿಮ್ಮನೆ ಮುಂದೆ ಸೆದು .....' ಇದು ಗಂಡ್ಮಗುವಲ್ಲ.....ಬೇರೆ **ಹೆತ್ಕೊಡಿ** ನಂಪೆಟ್ರೋಲಿಗೇಂತ ಕೇಳ್ತೀನೆ ! .....ಹೆದರ್ತಾನೆ ! ಹೆಂಗ್ಸು !

[ ಸ್ವಲ್ಪದೂರ ಜರಗುವನು. ]

**ಮಗೂ —** (ಹತ್ತಿರ ಬಂದು ಕಿಟ್ಟಿಯ ತೋಳಿನ ಮೇಲೆ ಕೈ ಹಾಕಿಕೊಂಡು ನಿರ್ಭೀತನಾಗಿ ನಗುತ್ತಾ).....ಈಗ ಹೆದ್ರಿಕೆಯಿಲ್ಲಾ ಕಾಣೋ !

**ಕಿಟ್ಟಿ —** (ಮಗುವಿನ ಹೆಗಲಮೇಲೆ ಕೈ ಹಾಕಿಕೊಂಡು)... ಅದು ರುಸ್ತುಂತನ !..........ಗಂಡ್ಸಿಗೆ ಫ್ರಾಬ್ರೇಂದ್ರೇನೋ !?........... ಈಗಿಲ್ಲಾಂದ್ಮೇಲ್ಲಾ......ಮೊದಲ್ ಫಾಬ್ರೀನೆ ?

**ಮಗೂ —** ಘಾಬ್ರಿ ಅಲ್ಲಾ ಕಾಣೋ!.........ಅದೊಂದ್ ನಮೂನೆ.....(ಹೊಟ್ಟೆಯನ್ನು ಸವರುತ್ತಾ).....ಫೀಲಿಂಗು.....ಕಾಣೋ!

**ಕಿಟ್ಟಿ —** ಅಂಥಾ ಫೀಲಿಂಗ್ ...ಫೀಲ್ ಆಗೋವ್ರಲ್ಲೀ..... ಘನಾ ಮಾಡ್ಬಿಡ್ಬೇಕಂ.....ಅಡಗ್ಸಿ ಇಟ್ಕೊಂಡಿದ್ರೆ.....ಡೇಂಜರು! ಬರೋವಾಗ್ಲೆಲ್ಲಾ ದಿಗಿಲ್ಬಿಟ್ಕೊಂಡ್ ಉಡಾಯ್ಸುತ್ತೆ! ಈ ಹೊತ್ತಿನ್ ಕುಸ್ತೀನ್ಲಾನಾ ಹಲ್ ಕಚ್ಕೊಂಡು ...ಸತ್ರೂ ಸರ್ಯೇಂತ ಮಾಡ್ಬಿಟ್ಯೋ .....ಇನ್ ಸಾಯೋವಗೂ........ಎಂಥಾ ಡೇಂಜರ್ ಬಂದ್ರೂ ಹೆದರ್ಕೊಂಡು ಹಿಂಜರಿಯೋದಿಲ್ಲಾ....ನೀನು! ಮುಂಡೇಗ್ ಹತ್ತಿತೇ?

**ಮಗೂ —** ಹೂನೋ!

**ಸ್ಕೌಟು ಮಾಸ್ಟರ್ —** (ಮುಂದಕ್ಕೆ ಬರುತ್ತಾ) ಏನೋ..... ಮಗೂ! ರಾಘು ಹೇಳೋ ಹಾಗೆ ....ನಿನ್ಗೆ ಗೆಲ್ಲೋ ಛಾನ್ಸೂ.....?

**ಕಿಟ್ಟಿ —** ಗೆಲ್ಲೋಕಲ್ಲಾ ಸಾರ್ .......... ಅವನು ಕುಸ್ತಿ ಮಾಡೋದು.....!?

**ಸ್ಕೌಟು ಮಾಸ್ಟರ್ —** ಮತ್ತ್ಯಾಕೋ?

**ಕಿಟ್ಟಿ —** ಕುಸ್ತೀಗೇಂತ.....ಅವನು ಕುಸ್ತಿ ಮಾಡೋದು... ಸಾರ್!

**ಸ್ಕೌಟು ಮಾಸ್ಟರ್ —** ಕುಸ್ತೀಗೇಂತ..........ಕುಸ್ತಿ !?.......... ಏನರ್ಥವೋ!.. ಆದಿಲ್ಲಿ ..... ನೀನ್‌ಯಾರೋ.... ಅವನಿಗೆ ಮಾತಾಡೋಕೆ.....ಅವನ್ಗೆ ಲಾಯರೀನೆ?

**ಕಿಟ್ಟಿ —** ಛಾರ್ಜ್ (Charge) ತಕೊಂಡಿಧೇನೆ ಸಾರ್ ... ಅವನ್ನ! ಅಲ್ಲ.....ಅವನ್ ನನ್ನ ದೋಸ್ತು.....(ಬೆಪ್ಪಾಗಿ).....ಅವನೇನೂ ಇಲ್ಲಾ ಸಾರ್.....ನನಿಗೆ!

**ಸ್ಕೌಟು ಮಾಸ್ಟರ್ —** ಸಾಕು! I cannot waste any more time!.....ಏನೋ ಮಗು?......

**ಮಗೂ —** ಮಾಡೇ ಬಿಡ್ತೀನೆ ಸಾರ್!

**ಕಿಟ್ಟಿ —** ನೀವ್ ಹೇಳಿದ ಹಾಗೆ.....ಚಿಕ್ಕವ್ನು ಸಾರ್.....ಎರಡು ಕುಸ್ತೀಗೆ ಬದ್ಲಾಗಿ... ಒಂದೇ ಮಾಡ್ಲಿ ಸಾರ್!

**ಸ್ಕೌಟು ಮಾಸ್ಟರ್ —** ಹ್ಯಾಗೋ?

**ಕಿಟ್ಟಿ —** ಹ್ಯಾಗೇನ್ ಸಾರ್? ಆ fourteen years ನೋರು ಇಬ್ಬರ ಜತೇಲೂ ಮಾಡೋದ್ಬಿಟ್ಟು....ಅವರು ಕುಸ್ತೀ ಮಾಡಿದ ವಿನ್ನರ್ ಜತೇಲಿ ಮಾಡ್ಲಿ ಸಾರ್!

**ಸ್ಕೌಟು ಮಾಸ್ಟರ್ —** (ಮುಗುಳ್ನಗೆಯೊಡನೆ) good! ನಿನ್ನ ತಲೇಲೂ ಸ್ವಲ್ಪ ಬ್ರೈನು (Brain) ಇದೆ!

**ಕಿಟ್ಟಿ —** ಸ್ವಲ್ಪ!?....ಬುರ್ಡೆಯೆಲ್ಲಾ ಬ್ರೈನೂ ಸಾರ್!

**ಸ್ಕೌಟು ಮಾಸ್ಟರ್ —** ಸಾಕೋ, ನಿನ್ ಪ್ರತಾಪ! (ಪಟ್ಟಿಯನ್ನು ನೋಡುತ್ತಾ) ಶಾಮಣ್ಣ. ರಾಮಸ್ವಾಮಿ.....start off!

[ಇಬ್ಬರೂ ಹೋರಾಡುವರು. ಶಾಮಿಯು ಎರಡು ಸಲ ಸೋಲಿಸುವನು.]

**ಸ್ಕೌಟು ಮಾಸ್ಟರ್ —** (ಬರೆಯುತ್ತಾ) First two falls and match to Shamanna......ಮಗು! **ಗೆಟ್‌ರೆಡಿ**!

**ಕಿಟ್ಟಿ —** ಇನ್ನೂ ಘಾಬ್ರೀನೇನೋ?

*

**ಮಗೂ** — (ನಗುತ್ತಾ) ಇಲ್ಲಾ......ಕಣೋ! (ಕಿಟ್ಟಿಯ ಕೆನ್ನೆಗೊಂದು ಪೆಟ್ಟನ್ನು ಬಿಗಿಯುತ್ತಾ) ತಗೋ......ಪ್ರೂಫೂ! (proofoo)!

**ಕಿಟ್ಟಿ** — (ಕೆನ್ನೆಯನ್ನು ಸವರಿಕೊಳ್ಳುತ್ತಾ) ಸಾಕೋ!...... ಒಪ್ಕೊಂಡೆ! ದಯವಿಟ್ಟು ಮರತ್ಬಿಡು ನನಗಿನ್ನೊಂದ್ ಕೆನ್ನೆ ಇರೋದ್ನ!............ಇನ್ಸ್ ಹೋಗು!

[ಮಗು, ಶಾಮಿ, ಹೋರಾಡುವರು. ಸ್ವಲ್ಪ ಮಾತ್ರದಲ್ಲಿಯೇ ಶಾಮಿಯು ಮಗುವನ್ನು ಎತ್ತಿ ಕೆಡಹುವನು. ಕಾಲಿಗೆ ಪೆಟ್ಟು ತಗಲಿ ಮಗು ಏಳಲಾರದೇ ಇರುವನು.]

**ಸ್ಕೌಟು ಮಾಸ್ಟರ್** — ಏನೋ, ಏಟ್ ತಗಲ್ತೇನೋ?

**ಮಗೂ** — ಇಲ್ಲಾ ಸಾರ್!....ಸ್ವಲ್ಪ.....ಯಲ್ಲೊ....

[ ಎಲ್ಲರೂ ನೋಡಲು ಮುಂದಕ್ಕೆ ಬರುವರು. ]

**ಶಾಮಿ** — (ಕಿಟ್ಟಿಗೆ, ಸ್ವಲ್ಪ ಭಯದಿಂದ).....ಬೇಕೊಂತೇನೂ ಮಾಡ್ಲಿಲ್ಲ ಕಣೋ......

**ಕಿಟ್ಟಿ** — ಗೊತ್ತೋ! ನಿನ್ನ ತಪ್ಪೇನೂ ಇಲ್ಲಾ! ವಜನ್ ಕಮ್ಮಿ ಅವ್ನು......ಲಾಟ್ಸಾಗಿ ಸಿಕ್ಕೊಂಡ ನಿನ್ ಕೈಗೆ.....ಪರ್ವಾ ಇಲ್ವೋ!....

**ಸ್ಕೌಟು ಮಾಸ್ಟರ್** — If you are not hurt, it is all right! ಆದ್ರೂ You are too small for Shamanna! (ಬರೆಯುತ್ತಾ) ಕೃಷ್ಣರಾವ್, ಅಪ್ಪೂರಾವ್, ಶಾಮಣ್ಣ,.....ಬ್ರಿಗೇಡ್ ಸ್ಪೋರ್ಟ್ಸ್ ದಿನ.....ರೆಡಿ ಆಗಿ!

**ಮೂವರೂ —** ಸರಿ ಸಾರ್ !

**ಕಿಟ್ಟಿ — ಆ ಹೊತ್ತು......ರ್‍ಯಾಲಿ......ಅಂಬೋದುಂಟೇ ಸಾರ್ ?**

**ಸ್ಕ್ಯಾಟು ಮಾಸ್ಟರ್ —** (ಕಿಟ್ಟಿಯ ಮುಖವನ್ನು ದುರುಗುಟ್ಟಿ ನೋಡಿ) **Hopeless!!**

[ ಎಂದು ನಿಟ್ಟುಸಿರು ಬಿಡುತ್ತಾ ನಿಷ್ಕ್ರಮಣ ]

**ಕಿಟ್ಟಿ —** ಕೇಳಿದ್ರೇನ್ರೋ ! ಲ್ರೋ ! ನಂ ಬಸ್ತೀನೆಲ್ಲ ಬೆದರ್ಸೋ ಭೂಪತೀನ.....ನಿಂ ಶುಕ್ರಾಚಾರ್ರು ಅಂದದ್ದು ಕೇಳಿದ್ರೇನ್ರೋ ?...(ಸ್ಕ್ಯಾಟು ಮಾಸ್ಟರಿನಂತೆಯೇ ನಿಂತು ಅಣಕಿಸುತ್ತಾ) **'Hopeless'!**

[ದಳದವರೆಲ್ಲರೂ ತಮ್ಮ ತಮ್ಮ ಅಂಗಿಗಳನ್ನು ಹಾಕಿಕೊಂಡು ಹೊರಡುವರು. ಮುಗು, ಕಿಟ್ಟಿ, ಮಟ್ಟಿಗೆ ಇರುವರು]

**ಕಿಟ್ಟಿ —** ಯಾಕಿನ್ನೂ ಬಿದ್ದಿಧೀಯೋ ?

**ಮುಗೂ —** (ಎದ್ದು ಕುಂಟುತ್ತಾ ಬಂದು) ಕಾಲು ಪರ್ವಾಇಲ್ಲ......ನಡೀತ್ತೇನೆ . .

**ಕಿಟ್ಟಿ — ಅದು ಗಂಡಸ್ತನಾ! ಹೆಂಗಸ್ರಾಂಗೆ ಹೆದರ್‍ಕೊಂಡು ನೆಟ್ಗರೋದ್ ಮೇಲೋ?,......ಭೂಪತಿ ಹಾಗೆ ಕುಸ್ತೀಲಿ ಕಾಲ್ ಮುರ್ಕ್ಕೊಳ್ಳೋದು ಮೇಲೋ ?** .....

**ಮುಗೂ —** (ನಗುತ್ತಾ) **ಕಾಲ್** ಮುರ್ಕ್ಕೊಳ್ಳೋದೇ.....!

**ಕಿಟ್ಟಿ — ವಾರೆ ಮೇರಾ ಷೇರ್ !....ಬೆದರ್‍ಕೊಂಡು ಬದ್ಕಿರೋದಕ್ಕೆ ಬದ್ಲಾಗೀ ಬ್ರೇವ್ ಆಗಿ ಬೆಂಕೀಲ್ ಬೀಳೋದ್**

**ಮೇಲೋ!**...**ಹೆಂಗಸ್ರೇ ಸಹಗಮನ** ಮಾಡ್ತಿದ್ರಂತೆ!..... ಬಾ!.....
ಎತ್ಕೊಂಡ್ ಹೋಗ್ತೀನೆ!.....

**ಮಗೂ —** ಪರ್ವಾ ಇಲ್ವೋ, ನಡೀತೇನೆ! ನಾನೇನೂ ಹೆಂಗ್ಸಲ್ಲ!.....

**ಕಿಟ್ಟಿ — ಕುಂಟ್ಕೊಂಬರೋದ್ರಲ್ಲೇನೋ ಗಂಡಸ್ತನ!**.. ಆದೂ ಅಲ್ದೆ ನಡದ್ರೆ ಜಾಸ್ತಿ ಆಗತ್ತೆ ನೋವು.....ಇನ್ನ್ ನೀನ್ ಬಿದ್ಕೊಂಡ್ರೆ.....ನಿಮ್ಮಮ್ಮ "ಮಗೂನ ಕರ್ಕೊಂಡ್ಹೋಗಿ ಕಾಲ್ ಮುರ್ಕೊಂಡ್ ಬಂದ; ಕೊನೇಗೂ "ಪೋಲಿ ಪೋಲೀನೆ" ಅಂದು ಕೊಂಡಾರು....ಬಾ .. ಕೋಟ್ಹಾಕ್ಕೋ! (ಮಗುವಿಗೆ ಕೋಟನ್ನು ತೊಡಿಸಿ ಹೆಗಲಮೇಲೆತ್ತಿಕೊಂಡು) ಈ ತಾಲೀಂ ಹಾಡ್ ಕಲ್ತ್ಕೊಳ್ಳೋ! ಯಾವಾಗ್ಲೂ ಗೈರತ್ ಹೋಗೋದಿಲ್ಲ!

"ಕಸರತ್ ಘಟಿಯಾ
ಕಭಿನೈ ಹಟಿಯಾ!
ಅಭಿತಕ್ ಪಹಿಲ್ವಾನ್
ಕಭಿನೈ ಹಟಿಯಾ!"......**ಕಿರ್ಲೋ!!**

[ಕಿಟ್ಟಿಯೂ ಅವನ ಹೆಗಲ ಮೇಲೆ ಮಗುವೂ ಈ ಹಾಡನ್ನು ಹಾಡುತ್ತಾ ನಿಷ್ಕ್ರಮಣ]

---

# ದೃಶ್ಯ ೮.

## ನೇಪಥ್ಯದಲ್ಲಿ

"ಕಸರತ್ ಘಟಿಯಾ......

ಕಭಿನಹಿ ಹಟಿಯಾ.....

ಅಭಿತಕ್ ಪಹಿಲ್ವಾನ್....

ಕಭಿನಹಿ ಹಟಿಯಾ.....

[ಎಂದು ಹಾಡುತ್ತಿರುವ ಕಿಟ್ಟಿ ಮತ್ತು ಮಗುವಿನ ಧ್ವನಿಗಳು ಹಾಡುತ್ತಾ ಹಾಡುತ್ತಾ ಕ್ರಮೇಣ ಸಮೀಪಿಸುವುವು]

**ಕಿಟ್ಟಿ —** (ಮಗುವನ್ನೆತ್ತಿಕೊಂಡು ಪ್ರವೇಶಿಸಿ) ಮಗೂ, ಲೇ, (ಮಗುವನ್ನು ಇಳಿಸಿ ನೆಲಕ್ಕಿಟ್ಟು) ಇಲ್ಲಿಂದ ಎರಡ್ ಫರ್ಲಾಂಗ್ ಕೂಡ ಇಲ್ಲ ನಿಂ ಮನೆ. ಇನ್ನ್ ಹೀಗೇ ಎತ್ಕೊಂಡ್ ಹೋಗಿಳ್ಸಿದ್ರೆ ನಿಮ್ಮಮ್ಮನ್ ಮುಂದೆ "ಮೈ ಕೈ ಮುರ್ದು ಮನೇಗೆ ತಂದು ಕೆಡ್ವೋಕೇ ನಿನ್ನ ಸುಪರ್ದಿಗೆ ಬಿಟ್ಟಿದ್ದು ನನ್ನ ಮಗೂನಾ"ಂತ ಕೇಳೋವಾಗ, ನಾನ್ ಕತ್ತೆತ್ತೋಕೆ.....ಗ್ಯರತ್ತಿರೋದಿಲ್ವೋ...... ಇದುವರ್ಗೂನಾನು ಯಾರ್ಹತ್ರಲೂ ಸರ್ ಝುಕಾಯ್ಸಿದ್ದಿಲ್ಲ.....ಅಭಿತಕ್ ಪಹಿಲ್ವಾನ್ ಕಭಿನಹಿ ಹಟಿಯಾ..... ಅದಕ್ಕೋಸ್ಕರ ಸ್ವಲ್ಪ ..... walking practise ಮಾಡು .....ಅರಮನೆ ಗೇಟ್‌ನಲ್ಲಿ ಸಿಪಾಯಿ .....duty ಗುಜಾರ‍್ಯೋ ಹಾಗೆ.... ಇಲ್ಲಿಂದಲ್ಗೆ, ಅಲ್ಲಿಂದಿಲ್ಗೆ, "ಶುಕ್ರು" ಹೇಳ್ಕೊಟ್ಹಾಗೆ.....Left...Right...Left...Right...about turn ತಿರ್ಗು Left .....Right .....ಮಾಡ್ತಿರು......ಇವತ್ ಕುಸ್ತೀಗೆ ಉತ್ರಾಯಿಸ್ದಾಗಿನಿಂದ, ಒಂದು ಬೀಡೀಗೂ ಬಿಡ್ವಿಲ್ಲ......ಇದು public

roadಉ ನಂ ಕೊಂಪೆ ನಸ್ದೀಕು.....ನೋಡಿದೋರು......ಗೀಡಿ ದೋರು ನಮ್ಮಪ್ನ ಹತ್ರ ಚುಕಾಯ್ಸಿದ್ರೋ ವರ್ತಮಾನಾನ ನಮ್ಮಪ್ನ ಕಿವೀಗೆ......ಇನ್ನು ಮುಂದೆ ಅನ್ನಜೀವ್ನ mental hospital ಊ ! again therefore (ಪ್ರವೇಶಿಸಿದ ಬಲ ಭಾಗವನ್ನು ಸೂಚಿಸಿ) ಆ ಮರದ ಕಟ್ಟೆ ಹಿಂದೆ ಎದುರ್ಗ ದವುಮ್ಮ ಎಳ್ಕೊಳ್‌ತ್ತೇನೆ..... ಅಪ್ಪ್ರವಗೂರ್ಗ ಸೀನಿಲ್ಲೀ ಠಳಾಯಿಸ್ತಿರು. ಆಗುತ್ತೋ್ಯೀ ಇಲ್ವೋ? ... ಇಲ್ಲಾ..... ಎತ್ಕೊಂಡೇ ..... ... ...?

**ಮಗೂ —** (at once) ಯಾಕ್ ಕಿಟ್ಟೀ... ನಾನೇನ್ ಹೆಂಗ್ಸಲ್ಲ.... "ಅಭಿತಕ್ .. ಪಹಿಲ್ವಾನ್ ...ಕಭಿನಹಿ ಹಟಿಯಾ" !!

**ಕಿಟ್ಟಿ —** ಹಾಗಾದ್ರೆ ಫೈಲ್ವಾನ್ ಆಗ್ತೋದೇ ನೀನು? . ಅದೂ ಗಂಡಸ್ತನ ಗುಬ್‌ಚೀ .ನನ್ನ ಗಾನ ಖಲೀಫ್ ಮಾಡ್ಕೊಂಡ್ಬ್ಯೇ ಗುಬ್‌ಚೀಯಿಂದ ಗಿಡ್ಡ ಆಗ್ತೋಗ್ತೀಯಾ ನೀನು ((Magu's eyes gleam) ಶುರು ಮಾಡ್ ನಿನ್ನ್ ಕವಾತ್ನ !....ನೋಡೋಣ !

[ ಮಗುವು ಪಟ್ಟು ತಿಂದ ಕಾಲನ್ನು ಅಂಗುಲದಷ್ಟೂ ಕದಲಿ ಸಲಶಕ್ತನಾದರೂ, ಕಿಟ್ಟಿಯು ಅಹರ್ನಿಶಿಯೂ ಜಪಿಸುವ ಗರಡಿ ವ್ಯಾಯಾಮ ಇತ್ಯಾದಿ ಮಹಾ ಸರ್ಪಗಳಿಂದ ಆವೇಷ್ಟಿತನಾಗಿ ಅವನ ರಜೋದ್ರೇಕ ವ್ಯಾಖ್ಯಾನಗಳಿಗೆ ಬೆಚ್ಚಿ ಬಿದ್ದು, ಹಲ್ಲು ಕಚ್ಚಿಕೊಂಡು, ನೊಂದು ಬಗ್ಗುವ ಕಾಲನ್ನು ನೆಟ್ಟಗೆ ಮಾಡಿ ರಂಗಸ್ಥಳಕ್ಕೆ ದಕ್ಷಿಣ ವಾಮ ಪಹರೆಯನ್ನು ಕೊಡಲು ಉಪಕ್ರಮಿಸುವನು. ]

ಭೇಷ್ ಗುಬ್‌ಚೀ ! ನಿಮ್ಮಮ್ಮನ್ ಮುಂದೆ ಹೀಗೆ ಇವತ್ತು ರಾತ್ರೆ ನಡೆದ್ಬಿಟ್ಟು, ನನ್ ಮಾನಾಗಾನ ಬಚಾಯಿಸ್ಬ್ಯೇ, ನಾಳೆ ಯಿಂದ ನಾನ್ ನಿನ್ನ slave ಉ. ...ಹೀಗೇ ನೆಟ್ಟಗ್ ನಡೀತಿರು..... ಬಂದೆ !

[ ಕಿಸೆಯಿಂದ ಬೀಡಿ ಕಟ್ಟನ್ನೂ ಬೆಂಕಿ ಪೆಟ್ಟಿಗೆಯನ್ನೂ ಹೊರ ತಂದು, ಬೀಡಿಯೊಂದನ್ನು ಆರಿಸಿ, ಕೈಗೊಂಡು ಕಟ್ಟನ್ನು ಕಿಸೆಗೆ ತಳ್ಳಿ ದಕ್ಷಿಣತಹ ನಿಷ್ಕ್ರಮಿಸುವನು. ಮಗುವು ಮೇರಿನಿಂದ ಮೇರೆಗೆ ಒಂದೆರಡು ಸಲ ಸಂಚರಿಸಿ ದಕ್ಷಿಣ ಮುಖನಾಗಿ ರಂಗಾರ್ಧವನ್ನು ಮೆಟ್ಟುತ್ತಿರಲು, ದೀರ್ಘಾಂಗಿಯಾದ ಸ್ತ್ರೀಯೊಬ್ಬಳು, ತಲೆಯಮೇಲಿಟ್ಟುಕೊಂಡ ತರಕಾರಿ ತುಂಬಿದ ಮುಕ್ಕರಿಯನ್ನು ಪ್ರಾಂಶುವಾದ ದಕ್ಷಿಣ ಬಾಹುವಿನಿಂದ ಹಿಡಿದುಕೊಂಡು, ಸವ್ಯ ಬಾಹುವಿನಿಂದ ತನ್ನಂತೆಯೇ ಅತಿ ಕೃಷ್ಣ ವರ್ಣದ ಕೂಸೊಂದನ್ನು ತನ್ನ ಘನ ವಕ್ಷಕ್ಕೆ ಅಪ್ಪಿಕೊಳ್ಳುತ್ತಾ, ರಂಗ ದಕ್ಷಿಣದಿಂದ ಪ್ರವೇಶಿಸಿ, ಮಗುವಿನ, ಇಲ್ಲಿಂದಲ್ಲಿನ ಅಲ್ಲಿಂದಿಲ್ಲಿನ ನಡೆದಾಟವನ್ನು ನೋಡ್ರಿ ತನ್ನ ಅಸಿತಾಸ್ಯದಲ್ಲಿ ವಿಸ್ಮಯವನ್ನು ವ್ಯಕ್ತಗೊಳಿಸಿ, ಸ್ತಂಭಿತಳಾಗುವಳು ]

**ಬಸವ್ವ —** ಇದ್ಯಾಕಪ್ಪೀ......ಇಲ್ಲಿಂದಲ್ಗೀ .... ಅಲ್ಲಿಂದಿಲ್ಗೀ ಓಡಾಡ್ತಿದೀಯಾ .....ಇಂಗೆ? ಯಾಕ್ ಬುಡಾಕಿಲ್ವಾ ನಿನ್ನ ಈಗಲ್ಲಿಯಿಂದಾ ಚೀಟ್ಗೆ ?

**ಮಗೂ —** (ನಡೆಯುತ್ತಾ) ಮಾತ್ಹಾಡ್ ಬೇಡಿ .....ನಾನ್ ಸ್ಕೌಟು !

**ಬಸವ್ವ —**ಅದೆಂತಾದ್ದು? .....ಕೌಟು!......ಅಂಗಂದ್ರೇನು .....ಮರಿ ಪೋಲೀಸಾ......ನೀನು!......ಅದೇನ್ ನೀನಂದದ್ದು ಅಪ್ಪೀ?

**ಮಗೂ —** (ನಡೆಯುತ್ತಾ) ನಾನು Boy Scoutoo.

**ಬಸವ್ವ —** ಯಾಕದು ?

**ಮಗೂ —** (ತಲೆಯನ್ನು ಕೆರೆದುಕೊಳ್ಳುತ್ತಾ) ಯಾಕೇಂದ್ರೆ ......good-turn ಮಾಡೋಕೆ......ಅಂದ್ರೇ ಉಪ್ಕಾರ ಮಾಡೋಕೆ.

**ಬಸವ್ವ —** ಉಪ್ಕಾರಾ ಮಾಡಾಕಾ.....ಇಂಗ್ ನೀನೋಡಾ ಡೋದು.....ಪ್ಲೀಸ್ನೋರಿಗ್ ಗೊತ್ತಾದ್ರೇನೋ?.....

**ಮಗೂ —** ಗೊತ್ತಾದ್ರೇನು! ಅವ್ರು ನಾವು ಹೆಚ್ಚು ಕಮ್ಮಿ ಒಂದೇ!

**ಬಸವ್ವ —** ಅಂಗಾರ್ ನೀನು ಮರಿ ಪೋಲೀಸೇ ನಾನೇಳ್ ದಂಗೇ! "ಉಪ್ಕಾರಾ"ಂದ್ಯಲ್ಲ ಅಪ್ಪೀ! ಯಾರಿಗ್ ಮಾಡೋಕ್ ಓಡಾಡ್ತಿರೋದ್ ನೀನು?

**ಮಗೂ —** (ತಲೆಯನ್ನು ಕೆರೆದುಕೊಳ್ಳುತ್ತಾ) ಯಾರಿಗೇನು? ಕೇಳ್ದೋರ್ಗೆಲ್ಲಾ....

**ಬಸವ್ವ —** ನಂಗೂನೂವೆ——?

**ಮಗೂ —** (hesitatingly).....ಹೂಂ.....

**ಬಸವ್ವ —** ಕೂಲಿ?

**ಮಗೂ —** ಏನೂ ಇಲ್ಲ (ಭೃಕುಟಿಗಳನ್ನು ಎತ್ತುತ್ತಾ) **ಏನೂ ಇಲ್ಲ!**

**ಬಸವ್ವ —** (ಆತ್ಮಗತಂ) ಇದೇನು ಒಸವುಚ್ಚ್ಯೋ!... ಸರ್ಕಾರೀದು.....ಇಂಗೆ ಬಿಟ್ಟೇ ಕೂಲಿಗಳ್ನ ಇಡಾಕೆ! [ ಕಿಟ್ಟೆಯು ಅಜ್ಞಾತನಾಗಿ ಪ್ರವೇಶಿಸಿ ಬಸವ್ವನ ಹಿಂದೆ ನಿಂತು ಆಕೆಯ ವಚನಗಳನ್ನೂ ಆಕರ್ಷಿಸಿ ಮೋದಿಸುತ್ತಾ ನಿಲ್ಲುವನು. ] ಅಂಗಾರೀ ಮುಕ್ರಿ ಪಶಿ ಎತ್ತ್ಕೋ ನನ್ರಾಜ! (ಶಾಕಾಭರಿತ ಪಿಟಕವನ್ನು ಮಗುವಿನ ಮೂರ್ಧನಿಯಮೇಲೆ ಪ್ರತಿಷ್ಠಿಸಿ) ಬುಟ್ಟುಗಿಟ್ಟೇಯಾ.....ಬಲ್ತಾ ಸೋರೆ ಬುಲ್ಡೆ ಅಂಗೆ ಬೆಳ್ದಿದ್ರೂನೂವೆ.....ಎಂಗ್ಸು.....ಎಂಗ್ಸೇ!.... ಮೆಣಸ್ನ ಈಚ್ನಂಗೆ

ಇದ್ದ್ರೂನೂವೆ, ಊರೋರ್ಗೆಲ್ಲಾ ಉಪ್ಕಾರ ಮಾಡೋಕೊಂಟ ನೀನು ಗಂಡ್ಸೇ! ಬಾರಾನಾ......ಬುಟ್ಬೇ?

**ಮಗೂ** — (ಹಲ್ಲು ಕಚ್ಚಿಕೊಳ್ಳುತ್ತಾ) ಇ... ಇ...... ಇ..... ಇ......ಲ್ಲಾ...!!

**ಬಸವ್ವ** — ಅಂಗಾದ್ರುಪ್ಪಾಜೀ.....ನನ್ಕೈಲ್ದ್ದ್ ವಸಿ.....ಇಡ್ಕೋ! (ತನ್ನ ಕಂಕುಳಲ್ಲಿದ್ದ ಕೂಸನ್ನೂ ಮಗುವಿನ ಕಂಕುಳಿಗೆ ವರ್ಗಾಸಿ ಭದ್ರಿಸಿ) ಬುಟ್ಕ್ಯಾಗಿಟ್ಟೇಯಾ! ಜೋಕೆ!......ಎಲೆ ಅಡ್ಕೆ ತಗಲ್ಸಿ ಏಟೊತ್ತಾಯ್ತೋ ನಾಲ್ಗೇಗೆ...ಕೂತ ನನ್ ಗಂಟಲ್ನಾ... ಎಚ್ಚರ್ ಸ್ತೀನಿ ವಸಿ! [ಮಡಿಲಿನಿಂದ ಸಂಚಿಯೊಂದನ್ನು ಹೊರ ತಂದು, ಯಥಾ ಸೌಕರ್ಯ ತಾಂಬೂಲ ಸಾಮಗ್ರಿಗಳನ್ನು ಸಂಯೋಗಿಸಿ, ಮೆಲ್ಲುತ್ತಾ, ಈ ಸುಖವನ್ನು ಅನುಭವಿಸುವ ಆವೇಶದಲ್ಲಿ, ಮುರಿದ ಕಾಲಿನ ಅವಸ್ಥೆಯನ್ನೂ, ಮಸ್ತಕದಮೇಲಿರುವ ಮಕ್ಕರಿಯ ಭಾರವನ್ನೂ ಕಲ್ಕಣಜದಂತೆ ಕಂಕುಳನ್ನು ಕಚ್ಚಿ ಹಿಡಿದುಕೊಂಡಿರುವ ಶಿಶು ವೇಷ ಧಾರಿಯಾದ ಕಷ್ಟಂ ಕರೇ ಕಲ್ಲುಗುಂಡಿನ ಒದ್ದಾಟವನ್ನೂ ಗಮನಿ ಸದೇ ಹಲ್ಲು ಕಚ್ಚಿಕೊಂಡು ಹೆಜ್ಜೆ ಹಾಕುತ್ತಿರುವ "ಗುಬ್ಬಚ್ಚಿ"ಯ ಅವಸ್ಥೆಯನ್ನೂ.....ಇದೆಲ್ಲವನ್ನೂ ಕೇಳಿ ನೋಡುತ್ತಾ ರೌದ್ರವನ್ನು ತಾಳಿ ಮುಷ್ಟಿಗಳನ್ನೂ ಬಿಗಿದು ಹಿಂಬರುವ ಕಿಟ್ಟಿಯನ್ನೂ ಗಮನಿ ಸದೇ, ಈ ಗಜಗಾತ್ರಿಯು ಮಂದಂಮಂದಂ ಮುಂದುವರಿಯುವಳು]

**ಕಿಟ್ಟಿ** — ಇದ್ಯಾಕೋ! ನಂದೇಶದ ಹೆಂಗಸ್ರೆಲ್ಲಾ two ವೇ two divisons ಉ!...ಹಂದಿ! ಇಲ್ಲ ಹಲ್ಲ!....ಉಬ್ಬು ಇಲ್ಲ ವಣಕ್ಲು!.....ಆನೆ...ಇಲ್ಲ.....ಅಳಿಲು! ನಂದೇಶದ ಹೆಂಗಸ್ರೇನೂ ... ಯಾವ್ ಹೆಂಗ್ಸೂನೂ.....ನಮ್ಮಮ್ಮ ಇಲ್ಲ ಮಗೂ ಅಮ್ಮನ್ಹಾಗೆ...... ಗಾತ್ರ ಹೇಗಿದ್ರೂನೂವೆ—ದಿಲ್ಲು ನರ್ಮೀಂತ ತಿಳ್ಕೊಂಡಿದ್ದೆ!...... ಇವಳಾದ್ರೋ, ಹೆಂಗಸಿನ್ಹಾಗೆ ಸೀರೆ ಉಟ್ಕೊಂಡಿದ್ರೂನೂವೆ...........

ಬೀದೀಲ್ ಹೋಗೋ ಬಚ್ಚಾನ್ ತಲೇಮೇಲೆ ಭರ್ತಿ ಶೋಕ್ರೀನೂ ಹೊರಿಸ್ಬಿಟ್ಟು.........ತಾನೆತ್ಲಾರ್ದ ಈ ಕೋಲ್ಸಾ ಭಟ್ಟೀಕೆ ಅವ ಲ್ಯಾದ್ನೂ, ಅವನ್ ಬಗಲಲ್ಲಿ ಬಿಠಾಯಿಸ್‌ಬಿಟ್ಟು, ಉಪ್ಕಾರ ಮಾಡಿಸ್ಕೋತಿದಾಳಲ್ಲಾ, ಮೆಲಕ್‌ಹಾಕ್ತಾ! ..ಹೀಗೆ ಊರ್‍ನೋರೆಲ್ಲಾ ಸ್ಕೌಟುಗ್ಳೆಲ್ಲಾರ್ ಕೈಲಿ ಉಪ್ಕಾರ ಮಾಡಿಸ್ಕೊಳ್ತಾ ಬಂದ್ರೇ ಊರ್‍ನೋರ ಕೈಯಿಂದ ಪ್ರತ್ಯುಪಕಾರಾನ ಮಾಡಿಸ್ಕೊಳ್ಳೋದು ಯಾವಾಗ್ಲೋ, ಸ್ಕೌಟುಗ್ಳು? .....ಯಾವಾಗೇನೂ !......ಊರ್‍ನೋರ್ ಒಬ್ಬೊಬ್ರೂ boy scouts ಆದ್ರೇನೇ...........possible!ಉ (ಮಗುವು ಹೊತ್ತಿರುವ ಮಕ್ಕರಿಯನ್ನು ಪರೀಕ್ಷಿಸಿ) ದೇವ್ರೇಗತಿ! ಎತ್ಕೋತಾ ಕುಂಬ್ಳಕಾಯಿ, ಕುಕ್ಕೇಲಿ! ಕಾಲ್ಮುರ್ದ ಗುಬ್ಬಚ್ಚೀನ ಕುತ್ಗೇನೂ ಮುರ್ದು ಮನೇಗ್ ಕರ್ಕೊಂಡ್ ಹೋಗೋಕೆ ನನಗ್ ಹೆದರ್ಕೆ.. .ಎತ್ಕೋತಾ ನನ್ನ first duty ಉಪ್ಕಾರ ಮಾಡ್ಬೇಕಾದ್ದು, ನಾನು, brother scoutಗೆ!.....ಮಗೂಗೂ ಉಪ್ಕಾರಾ ಮಾಡಿ, ಪ್ರತ್ಯುಪ್ಕಾರಾನ ಮಾಡಿಸ್ಕೊಂಡು, ಮಗೂ ಮನೆ ನಾರಾಯಣನ್ ಕೈಲಿ ಇದ್ನ ಹಲ್ವಾ ಮಾಡ್ಸಿ ತಿಂದು, ಸಂತೋಷಪಟ್ಟು, ನನಗ್‌ಮಟ್ಗೆ special rally ಮಾಡಿಸ್ಕೊಂಡು, ಪ್ರಪಂಚದಲ್ಲಿ first rally ಮಾಡಿಸ್ದ England ದೇಶ್ದಲ್ಲಿ, Walter ಕೈಯಿಂದ good turn ಮಾಡಿಸ್ಕೊಂಡ first girl guide Queen Elizabeth ನ ಹಾಗೆ ಈ ಕಾಲು ಹುಟ್ಟಿದ ಕರಿಗಿರಿರಂಗನ ಬೆಟ್ಟಾನ ಈ ಕ್ಷಣವೇ ಮೈಸೂರು ದೇಶದ ಮೊದಲು girl guideಆಗಿ ಮಾಡೋದು ನನ್ನ second duty .....(ಹುಷಾರಾಗಿ ಕುಂಬಳಕಾಯನ್ನೆತ್ತುವನು. .. ಭಾರವು ಕಮ್ಮಿಯಾಗುತ್ತಲೂ ತಿರುಗಿ ನೋಡಿದ ಮಗುವನ್ನು ಮುಖದ ರೌದ್ರದಿಂದಲೂ ತುಟಿಗಳಿಗೆ ತಗುಲಿಸಿದ ಬೆಟ್ಟನಿಂದಲೂ, ತೂಷ್ಣಿಸಿ).....ಆಸ್‌ಬಾಬು ವರ್ಜ......ದೊಡ್ಡ ಬಾಬ್ತು......ಮುಂಡಾದ್

ಮೇಲೆ ಬಿಠಾಯಿಸ್ಕೊಂಡ್ರೋ, ಮುಂದೆ ವಿಚಾರ್ಣೆ ಆಗೋವಾಗ ಹೆಗಲ್ ಮುಟ್ಟಿ ನೋಡ್ಕೊಂಡು ಹೊರಗ್ಹಾಕಿಬಿಟ್ಟೇನು ಚೋರೀನ! ......(ಕ್ಷಣಮಾತ್ರ ಯೋಚಿಸಿ ಕಾಯನ್ನು ಷರ್ಟಿನೊಳಪಡಿಸಿ) team ನಲ್ಲಿ ನಾನಿದ್ದಾಗ centre forward ಉ.....ಆಗ್ ನಾನಿದ್ದಾಗೆ ಈಗ್ಲೂನೂ! ಆದ್ರೆ ಇದು hopelessಉ! ..Therefore (ಕ್ಷಣ ಮಾತ್ರ ಯೋಚಿಸಿ ಷರಟಿನೊಳಗೆಯೇ ಕಾಯನ್ನು ಉರುಳಿಸಿ ಬೆನ್ನಿನ ಕಡೆ ರವಾನಿಸುತ್ತಾ) only chance,ಉ Chaney— Lon chaney (ಕಾಯನ್ನು ಆಗ್ರೀವಾಂತಂ ಬೆನ್ನಿಗೆ ತಿರುಗಿಸಿ ಕೊಂಡು) Hunch back of ನಾಟ್ರೇಡ್ಯಾಮ್ !! (ಮತ್ತೆ ಪುನಃ ಕುಕ್ಕೆಯನ್ನು ಇಣಿಕಿ ನೋಡಿ ತಲೆಯ ಟೋಪಿಯನ್ನು ತಲೆಕೆಳ ಕಾಗಿ ಸಿಕ್ಕಿಸಿಕೊಂಡು ತುಂಬುವಷ್ಟು ತರಕಾರಿಗಳಿಂದ ತುಂಬಿ ಕೊಂಡು, ಬಸವ್ವನಿಗೆ ಟೋಪಿ ಮತ್ತು ಬೆನ್ನಿನ ಮೇಲಿರುವ ಭಾರಗಳು ಕಂಡುಬಾರದಷ್ಟು ದೂರ ಹಿಮ್ಮೆಟ್ಟಿ......ಥಟ್ಟನೆ ರೌದ್ರ ಸ್ವರದಿಂದ) constable ರಂಗಣ್ಣಾ! Halt! About turn! (ಮಗುವು ದಕ್ಷಿಣಮುಖಂ ತಿರುಗುವನು.) ನಿನ್ನ ರಸ್ತೆ ನೋಡ್ಕೋಂತ ಕಳ್ಸಿದ್ದೇನು?......ನೀನೀಗ ಮಾಡ್ತಿರೋದೇನು? fool!.....quick march!......ಈ ಕೂಸ್ನೂ ಈ ಕುಕ್ಕೇನೂ ಈ ಓಣಿ ಕೊನೇಗೆ ಹೋಗಿ ಕುಕ್ಬಿಟ್‌ಬಾ, quick march! (ಬೆಚ್ಚಿ ಬಿದ್ದ ಮಗುವು ಕಿಟ್ಟೆ ಹೇಳಿದಂತೆ ಹಾದು ಹೋಗುತ್ತಿರುವಾಗ) ಗುಬ್ಬೀ ಲೇ! ಹೇಳಿದ್ದಾಗ್ ಮಾಡಿ ಬಚಾಯ್ಸೋ ನನ್ನ್ ಇ z z ತ್ನಾ......Quick march!.....Left ....right.....Right .....Left ........ಓಣಿ ಕೊನೇಲ್ ಕುಕ್ಕು ಆಸ್ಬ್ಬಿಟ್ಟು! ಆ ಮೇಲೆ about turn ಮಾಪ್ಸು ಬಾ!

[ಬೆಚ್ಚಿ ಬಿದ್ದ ಮಗುವು, ಹಾಗೆಯೇ ಮಾಡಲು ದಕ್ಷಿಣತಃ ನಿಷ್ಕ್ರಮಿಸುವನು]

**ಬಸವ್ವ —** (ಕೂಸೂ ಕುಕ್ಕೆಯೂ ಹೋಗುವ ಹೆದರಿಕೆಯಲ್ಲಿ ಕಿಟ್ಟಿಯ ಟೋಪಿ, ಬೆನ್ನುಗಳನ್ನು ಗಮನಿಸದೆ ತಿರುಗಿ) ಅಯ್ಯೋ! ನನ್ ಐದಾ!.....ನನ್ ಮಕ್ರೀ! ...

**ಕಿಟ್ಟಿ —** ಮಾತ್ಡ್ಬೇಡಿ!.... ನಮಸ್ಕಾರ! (ಕೈಯನ್ನು ಬೀಸಿ ತೋರಿಸುತ್ತಾ) ಅಲ್ಲಿಂದಿಲ್ಲೀಗೆ ಇಲ್ಲಿಂದಲ್ಲೀಗೆ double ಉಪ್ಕಾರ.....ನಿಂಕೆಲ್ಸ ಯಥಾಪ್ರಕಾರ, ಕೂಸ್ನೂ, ಕುಕ್ಕೇನೂ, ಎಲ್ಲಿ ಇಳಿಸಿದ್ರೋ, ಅಲ್ಲಿಂದ್ ಮುಂದಕ್ಕೆ...

**ಬಸವ್ವ —** (ಕಿರುಚುತ್ತಾ) ಅಯ್ಯೋ! ನೀವ್ರೋ! ನಿಮ್ಮ್ಮ ಪ್ಕಾರಾನೋ!.....ನನ್ ತರ್ಕಾರಿ!...ನನ್ ಕುಕ್ಕಿ...ನನ್ ಐದಾ!

[ಅರಚುತ್ತಾ ದಕ್ಷಿಣತಃ ನಿಷ್ಕ್ರಮಿಸಿರುವ ಮಗುವನ್ನು ಹಿಂಬಾಲಿಸಿ ನಿಷ್ಕ್ರಮಿಸುವಳು]

**ಕಿಟ್ಟಿ —** ["Reverse gear" ನಲ್ಲಿ ಹಿಂದೆ ಸರಿಯುವ ಮೋಟಾರಿನಂತೆ, ತಾನು ಹೊತ್ತ ಹೊರೆಯು ಹೆಂಗಸಿಗೆ ಕಂಡು ಬರದಷ್ಟು ಹುಷಾರಾಗಿ ರಂಗದ ವಾಮತಃ ಹಿಮ್ಮೆಟ್ಟುತ್ತಾ] Constable ರಂಗಣ್ಣಾ! ಒಡ್ಬಂದು join ಮಾಡ್ಕೋ ನಿನ್ನ duty ಗೆ!! [ ನಿಷ್ಕ್ರಮಿಸುವನು ]

[ಮಗುವು ಕುಂಟುತ್ತಾ ಪ್ರವೇಶಿಸಿ ದಕ್ಷಿಣದಿಂದ ವಾಮವನ್ನು ಹಾದು ನಿಷ್ಕ್ರಮಿಸುವನು]

[ ದಕ್ಷಿಣತಃ ನೇಪಥ್ಯದಲ್ಲಿ ಬಸವ್ವನ ಆರ್ತನವು ಕೇಳಿಬಂದು ನಿಲ್ಲುತ್ತಾ, ಬೀದಿಯ ಪರದೆಯು ಎದ್ದು ಮತ್ತೊಂದು ಬೀದಿಯ ಮನೆಯ ಮುಂಭಾಗವು ವ್ಯಕ್ತವಾಗುವುದು. ]

**ಮಗೂ —** (ಹಿಮ್ಮೆಟ್ಟುತ್ತಾ ತನ್ನ ಮುಂದುವರಿಯುವ ಕಿಟ್ಟಿ ಯೊಂದಿಗೆ ವಾಮತಃ ಪ್ರವೇಶಿಸಿ) ಇದೇನ್ ಕಿಟ್ಟಿ! ತುರಕ್

ಭಾಷೇಲಿ ನೀನು ಥೇಟಾಗಿದ್ದಾ ಕ್ಷಣವೇ.........ನಡ್ಯೋದ್ರಲ್ಲೂ ಆ ಭಾಷೇನ ಬರ್‍ಯೋ ಹಾಗೆ ನಡೀಬೇಕೇ?

**ಕಿಟ್ಟಿ** — (ತಿರುಗಿ) ಬಲ್ ವzನ್ನೋ! (ಮೆಲ್ಲಗೆ ಕೂಷ್ಮಾಂಡ ಇತ್ಯಾದಿ ಶಾಕಗಳನ್ನು ರಂಗದ ದಕ್ಷಿಣಾಂತ್ಯದಲ್ಲಿಟ್ಟು) ಗುಗ್ಗು ಲೀ...... ನಿನ್ನ ಗರ್ದನ್ನೂ. ಬಗಲ್ನೂ....ದುಖಾಯಿಸ್ದ... ಆ ಹಿಡಿಂಬಿ ಹತ್ರ ಲಪ್ಟಾಯಿಸಿದ ಬಾಬ್ತೋ ಇದು!

**ಮಗೂ** — ಓಹೋ!.. ಅದಕ್ಕೇನೋ ಬಚ್ಚಿಟ್ಕೊಂಡು ನಡೆದಿದ್ದ್ ಹೀಗೆ?!

**ಕಿಟ್ಟಿ** — ಹೂಂ!!... ಲಪ್ಟಾಲಜೀಲಿ first rule ಉ— **ಮಾಲೀಕ ಮರೆಯಾಗೋವರೆಗೂ ಮಾಲನ್ನು ಮರೆಮಾಚಿ ಇಡೂ!!** ಹೂಂ! ಇತಿ ನನ್ನ ಅಮರಃ! ಆ ಕಿರಾತಿಕ್ಕೈಲೀ ಸಿಕ್ಕೊಳ್ಳೋದು! ..... ಕುಂಬ್ಳಕಾಯಿ.... ಕಳ್ಳನಾಗಿ? ..... ನಾನು?......Poli Kitti?......Never let it be said!.....Therefore.....ಇಷ್ಟು ಮೆಹನತ್ತು...... ಅರ್ಥವೇ?......ಈ ಬಾಬ್ತುಗ್ಳು ನಿಮ್ಮನೇ ನಾರಾಯಣ್‌ನ ಅಡ್ಡೆ-officeಗೆ ದಾಖ್ಲಾಗೋವು.........ಇಲ್ಲ್ ಬಂದ್ ಕೂತ್ಕೋ...(ಮಗುವು ಹಾಗೆ ಮಾಡುತ್ತಲೂ) ಇಲ್ಲ್ ನೋಡ್ ಮಗೂ! ನೀನ್ ಗೂಡು ಸೇರೋವರ್‍ಗೂ ಘಬ್ರಾಯಿಸ್ತಿರ್‍ತಾಳೆ ನಿಮ್ಮಮ್ಮ!......ನ್ಯಾಯ! ಹೆತ್ತ್ ಹೊಟ್ಟೇ! ದೇವ್ರೇಗತಿ!......ಮರ್‍ತೇ ಬಿಟ್ಟೆ, ನಮ್ಮಪ್ಪನ್ನ......ನಿನ್ನ ಮನೇಗ್ ಸೇರ್‍ಸೋ ಗಲಾಟೇಲಿ.....

**ಮಗೂ** — ಏನ್ ಮರ್‍ತ್ತದ್ ಕಿಟ್ಟೀ?

**ಕಿಟ್ಟಿ** — ನಗ್ಬೇಡ ಗುಬ್ಬೀ......... ನಮ್ಮಪ್ಪ ಹೆಣ್ಣಾಕ್ಸು .. ನಮ್ಮಮ್ಮ್ ಸತ್ತಾಗ್ನಿಂದ ನೀನ್ ಮನೇ ಸೇರೋವರ್‍ಗೂ ನಿಮ್ಮಮ್ಮ ಹೆದರ್‍ತಿರೋ ಹಾಗೆ ಹೆದರ್‍ತಿರ್‍ತಾನೆ ನನ್ಮೋತೀಮೂತೀನ ನೋಡೋ

ವರ್ಗೂ!......ಹೊತ್ತ್ ಮುಳುಗುತ್ಲಾವೆ ನಂ ಕೇರೀನೆಲ್ಲಾ ಗಡ್ ಗಡಾಯ್ತೋ ನನ್ನ.....ಭೂಪ್ತೀನ......ಯಾವ್ ಗಾಡೀನೋ, ಯಾವ್ ಮೋಟ್ರೋ.....ನಿಮ್ಮಪ್ಪ, ನಮ್ಮಣ್ಣನ್ ಹಾಗೆ, ದುಡ್ಡಿಂದ್ ಕೊಬ್ದೋರ ಕಾರಿನ ಕೆಳ್ಗೆ . ....ಸತ್ತಿರ್ತೀನೋಂತ......ಹೆಣ್ಣಕ್ಕಾಗಿ ಹೆದರ್ತಿತಾರ್ನೆ ಇಷ್ಟ್ ಹೊತ್ಗೆ .....ಸಂಧ್ಯಾವಂದ್ನೇನ ಆಟ್ಸ್ ... ಬೂದಿ ಬಳ್ಕೊಂಡ್ ನನ್ನ್ ಹಣೇಗೆ.. ನಮ್ಮಪ್ಪಿಗೆ ದಿಕ್ಕಾಯ್ತು.. ಹಿತ್ಲು ಗೋಡೇನ್ ಹಾರಿ... ನಿನ್ನ ಬಂದ್ ಸೇರೋವರ್ಗೂ—, ನೀನಿಲ್ಲೇ, ನಂ ಮೋಟೋ ಹಾಗೆ Be prepared ಆಗಿರ್ಬೇಕು. .ಆಮೇಲೇನ್ ಇದ್ದೇ ಇದೆ ಯಥಾಪ್ರಕಾರ (ಮಗುವಿನ ಎರಡು ಕೆನ್ನೆಗಳನ್ನು ಎರಡು ಕೈಗಳಿಂದಲೂ ಬಡಿಯುತ್ತಾ) ನೀನು.....ನಿಂ ಬಂಗ್ಲೆ! ನಿಮ್ಮಮ್ಮಂಗೆ ನಿನ್ನ್ ಮೊಖಾಬ್ಲೆ.. . ...ನನಗೆ ನಾರಾಯಣನ ಮೊಕ್ತಾಬ್ಲೆ! ಕಾಫಿ.... .ಉಪ್ಪಿಟ್ಟು ಎಟ್ಬಿಟ್ರು.... . ಇಲ್ಲಿಂದ ಕದಲ್ಬೇಡ ..ಬಂದೇಬಿಡ್ತೀನೆ..... ....**ಬಂದೇಬಿಡ್ತೀನೆ** . ... ಅಷ್ಟ್ರವರ್ಗೂ ಜಪಿಸ್ತಿರು .. ......

"ಕಸರತ್ ಘಟಿಯಾ ಕಭಿನಹಿ ಹಟಿಯಾ"

ಕಾಲ್ ನೋಯುತ್ತೇ ?

**ಮಗೂ —** ಏನೂ ಇಲ್ಲ.....ಮೊಣಕಾಲು.. ಸ್ವಲ್ಪ .

**ಕಿಟ್ಟಿ. —** ಒಳ್ಳೇ ಗಂಡ್ಸೋ!......ಬೊಗಳ್ಬ್ಯಾರ್ದೆ?......ಶುಕ್ರಾಚಾರಿ......ಅಲ್ಲ ಎಸ್ಸೆಮ್ಮೋ ...First aid ಬಾಬತ್‌ನಲ್ಲಿ ಗೋಳಾಡಿದ್ದಾಗೆ......"**ಕಾಲೂನಕ್ಕೋಲ್ದ bandageoo**".....ಕದಲ್ದೆ ಇಲ್ಲೇ ಕುಕ್ಕರಸ್ಕೋ! (tares his own banian into a strip; rushes out saying "ಕೋಳಾಯಿಲ್ಲೇ ಇದೆ" and re-enters with the strip soaked)

ಕೊಳಾಯಿ convenient ಕಾಣೋ ಕಾಲ್ ಮುರ್ದ್ಕೋರ್ಗೆ.....
(binds it around ಮಗೂ's knee, and standing up) ಮರೀಬೇಡ ಮಗು.....ಉತ್ತರಾರ್ಧ ಮರೀಬೇಡ.....
"ಅಭಿತಕ್ ಪಹಿಲ್ವಾರ್ ಕಭಿನ್ಹೈ ಹಟಿಯಾ"! ಕದಲ್ಬೇಡ ಇಲ್ಲಿಂದ!.....ಬಂದೇ ಬಿಡ್ತೀನೆ.

[Exit]

**ಮಗೂ —** ಈಗ ಯಾರನ್ ನಂಬೋದೋ ಕಾಣೆ.....
ಒಂದ್ ಕಡೆ ಜಂಬದ್ಕೋಳಿ ರಾಘು.....ಒಂದ್‌ಕಡೆ ಅಮ್ಮ.....ರಾಘು ಹೇಳೋದೋ, "ಆ ಪೋಲಿ ಸಹವಾಸ ತಪ್ಸೊ"ಂತ....ಅಮ್ಮನೋ "ನೀನು ಬಂದ್‌ಮನೇ ಸೇರ್ದ್ಯಲ್ಲಾ, ಕಿಟ್ಟಿಮನೇಲಿ, ಏನು, ಹ್ಯಾಗಿಧೆ ವಿಚಾರಿಸ್‌ದ್ಯಾ"ಂತಾಳೆ....ಇವನ್ ಹೇಳ್ದ್‌ಹಾಗೆ ಥೇಟ್ ಪೋಲೀನೇ ಇವ್ನು....ಬೇಡದ್ ಕುಸ್ತೀನ್ ನನ್ನ ಕೈಲ್‌ಮಾಡ್ಸಿ..........ಕಾಲ್ ಮುರ್ಸಿ.....Cold Bandage ಕಟ್ಟಿ ಕುಕ್ಕರ್ಸಿಸಿ ನಡುರಸ್ತೇಲಿ .... ಜಪಿಸ್ತಿರೂಂತ ಹೇಳ್ಬಿಟ್ಟ್ ಹೋಗಿಧಾನೆ. ಆದ್ರೂ ರಾಘು ಜಂಬದ್ಕೋಳೀನೆ.....ಅಮ್ಮ ಅಮ್ಮನೇ.....ಅವ್ರ್ ಹೇಳೋಹಾಗೆ ಕಿಟ್ಟಿ ಕಿಟ್ಟೀನೆ! ಸರಿ! "ಕಸರತ್ ಘಟಿಯಾ, ಕಭಿನಹಿ ಹಟಿಯಾ, ಅಭಿತಕ್ ಪಹಿಲ್ವಾನ್, ಕಭಿನಹಿ ಹರಿಯಾ"....ಇದೇನ್ ಬೆಳ್ಕು !....ಹಯ್ಯೋ! ಬೆಂಕಿ !!

[ತಾನು ಕುಳಿತಿರುವ ಮನೆಯ ಮುಂಭಾಗದಲ್ಲಿರುವ ಬಾಗಿಲು ಕಿಟಕಿಗಳು ಥಟ್ಟನೆ ಬೆಳಕು ತುಂಬಿರುವುದನ್ನು ಗಮನಿಸಿ,]

ಅಯ್ಯೋ! ಇದೇನಿದು....ಬೆಳ್ಕು. ಅಲ್ಲ ಬೆಂಕಿ....ಒಳಗೆ ಯಾರೂ? (ಕಿವಿಯನ್ನು ಚಾಚುತ್ತಾ) ಹಯ್ಯೋ! ಕಿರ್ಲ್ತಾ ಇದಾರೆ (ಎದ್ದು ಕುಂಟುತ್ತಾ ಬಾಗಿಲನ್ನು ಸಮೀಪಿಸಿ) ಹಯ್ಯಯ್ಯೋ....

ಹೆಂಗ್ಸು ಯಾರೋ....(ಹೆದರಿ) ಓಹೋ! ಮರ್ತೆ (ಜೇಬಿನಿಂದ ಸೀಟಿ ಯನ್ನು ಸೆಳೆದು ಊದಿ)

[ ನೇಪಥ್ಯದಲ್ಲಿ "ಹಯ್ಯೋ....ಇನ್ನೇನ್ ಗತೀ" ]

ಇದೋ! ಬಂದೇವ್ರಾ

[ Exit through door ]

[Re-enter limping, dragging a woman, latter shouting "ಕೂಸೂ....ಕೂಸು"...."ಇವ್ರು" !]

**ಮಗೂ —** ನೋಡ್ದೇವ್ರಾ....ತೊಟ್ಲಲ್ನ....ಇಲ್ಲೇ ಇರಿ.... ಎತ್ಕೊಂಡ್ ಬರ್ತೇನೆ....ಭಯ್‌ಪಡ್ಬೇಡಿ....ನಂಬೀವ್ರಾ (blows the whistle again) ಯಾರ್ ಬರ್ಲಿಲ್ಲ....ಯಾರೂ? ಕಿಟ್ಟೇನೂ ಇಲ್ಲ! ಇನ್ನೂ ಅವ್ನ ಇದ್ದಿದ್ರೆ.. (Exit as before......Re-enter with baby in cradle) ಇಕೋ ಕೂಸೂವ್ರಾ.

**ಈಕೆ —** (ತೊಟ್ಟಿಲು ಸಮೇತ ಮಗುವನ್ನು ಅಪ್ಪಿಕೊಂಡು) ..."ಇವ್ರು" . !?

**ಮಗೂ —** ಎಲ್ಲವ್ರಾ? (ಭಯದಿಂದ ಜ್ವಾಲೆಯನ್ನು ಕಾರುತ್ತಿರುವ ದ್ವಾರವನ್ನು ಸಮೀಪಿಸಿ) ಹಯ್ಯೋ! ಯಾರೋ ಕಿರ್ಲ್‌ತಿಧಾರಿ ವಳಗ್ ಸಿಕ್ಕೊಂಡು.. ಗಂಡ್ಸು "ಬೆಂಕಿ ಬೆಂಕೀ"ಂತ!

**ಈಕೆ —** ಹಯ್ಯೋ ಇವ್ರೇ!...ಜ್ವರ......ನಿಸ್ತ್ರಾಣೆ......ಪಡಸಾಲೇಲಿ.....ಇನ್ನೇನ್ ಗತೀೀೀೀ !!!! [ತೊಟ್ಟಿಲಿನಲ್ಲಿರುವ ಮಗುವನ್ನು ಬಿಟ್ಟು ಹೋಗಲಾರದೆಯೂ, ಪತಿಯ ಸಮೀಪಕ್ಕೆ ಹೋಗಲಾಗದೆಯೂ, ಬಾಗಿಲಿಗೂ, ತೊಟ್ಟಿಲಿಗೂ ಹಾರಾಡುತ್ತಿರುವಳು.]

**ಮಗೂ—**(ಸೀಟಿಯನ್ನು ಮತ್ತೊಂದು ಸಲ ಊದಿ, ನಡುಗುವ ಧ್ವನಿಯಿಂದ) ಭಭಭಭಯಪಡ್ಬೇಡೀವ್ರಾ [Exit !-Re-enter after fully a minute with the man. The man sits down and wife's attentions to revive him succeed.]

**ಮನೆಯಜಾತ —** (ಕಣ್ಣು ತೆರೆಯುತ್ತಾ) ಎಲ್ಲಿಧೇನ್!! (ಥಟ್ಟನೆ) ಹಯ್ಯೋ ಹೌದು ಬೆಂಕಿ.. (to wife) ಇಧೀಯಾ (grabbing his wife's hand) ಕೂಸು ಭದ್ರವೇ ?

**ಈಕೆ —** ಹೂ ... (ಮಗುವನ್ನು ತೋರಿಸಿ) ನಂಭಾಗದ್ ದೇವ್ರುಹಾಗೆ ಬಂದ ಈ ಹುಡುಗನ್ ಧೈರ್ಯದಿಂದ ...ಮನೇನೂ ಸಾಮಾನೂ ಬೆಂಕೀ ಪಾಲಾದ್ರೂನೂವೆ ಸಾವ್‌ಭದ್ರ . ಹ್ಯಾಗ್ ಬಿತ್ತೀ ಬೆಂಕಿ... ?ಮುಂದಿನ್ಕೋಣೆ ಸೀಮೆ ಎಣ್ಣೆ ದೀಪವೇನಾದ್ರೂ ? ಇಲ್ಲ ಪಡ್ಸಾಲೇಲಿ ಪೆಟ್ಗೆ ಪಕ್ಕದಲ್ಲಿ ಇಟ್ಟ ದೀಪಾ ಏನಾದ್ರೂ? ಇಲ್ಲ; ನಾ ಬರೋವಾಗ್ ಕೂಡ ಉರೀತಾ ಇತ್ತು ಸರ್‍ಯಾಗಿ.

**ಮನೆಯಜಾತ —** ಪೆಟ್ಗೆ ಅಂದ್ರೆ ಜ್ಞಾಪ್ಕ ಬರುತ್ತೆ....ಹಯ್ಯೋ! ಪೆಟ್ಗೆ ಮುಚ್‌ಲೂ ಇಲ್ಲ. ಬ್ಯಾಂಕ್ನಲ್ ನಂಬ್ಕೆ ಇಲ್ದೆ ಮೂರ್‌ವರ್ಷ್ ದಿಂದ ಕೂಡ್ಹಾಕಿದ್ದ ದುಡ್ಡು ನೋಟ್ ನೋಟಾಗಿ ತುಂಬಿಟ್ಟಿದ್ದೆ . ಹಯ್ಯೋ! ಇನ್ನು ಬದುಕಿತಾನೇ ಏನುಪ್ರಯೋಜ್ನ.....ಮನೇನೂ ಹೋಗಿ ಇದ್ದ ದುಡ್ಡೂ ಹೋದ್ಮೇಲೆ ಮನೆಮನ್ಗೂ ಹೋಗಿ ಭಿಕ್ಷಾ ಬೇಡೋದೇ? ಕೆಟ್ವಲ್ಲಾ......(gradually crawls up to the door and pointing) ಹಯ್ಯೋ ಇಲ್ಲೀ ಇಧೆ....ನನ್ನ ಕಣ್ಣಿಗ್‌ಕಾಣ್ಸೋ ಹಾಗಿಧೆ....ನನ್ನ ಪ್ಯಗಾನ ನೆಟ್ಟಗಿದ್ದಿದ್ರೆ ನಾನೇ ಹೋಗ್ತಿದ್ದೆ....(to ಮಗೂ) ಮಗು, ಅಪಾಯ ಹೌದು....ಆದ್ರೂ

*

ಅಷ್ಟ್ಕಷ್ಟ್ವಲ್ಲಾ....ಇಲ್ಲೇ ಇಧೆ ನೋಡು....ಆ ಮಗು ತೊಟ್ಲತ್ತು ನೋಡು ಅಲ್ಲೀ....ಅದರ್ ಪಕ್ಕದಲ್ಲೇ....ಒಂದೆರಡ್ ಹೆಜ್ಜೆ ಮಗು ಅಷ್ಟೆ! ...

**ಈಕೆ** — ಅಯ್ಯೋ! ಬೇಡೀಂದ್ರೆ....ಬೆದ್ರೋ ಹಾಗಿಧೆ ಆ ಮಗು....ಯಾರ ಮಗೂನೋ ಪಾಪ....ಅದಿಷ್ಟ್ವಮಟ್ಗೆ ಮಾಡಿದ್ದೇ ಎಷ್ಟೋ ಉಪ್ಕಾರಾಂದ್ರೆ ...ಹಯ್ಯೋ! ಒಂದ್ ಪ್ರಾಣಿ ಇಲ್ವೇ ಈ ಹಾಳಾದ್ ಬೀದೀಲಿ?.. ಒಬ್ ಗಂಡ್ಸಿದ್ದಿದ್ರೆ?

**ಮಗೂ** — (at once) ಯಾಕಮ್ಮಾ ನಾನೇನ್ ಹೆಂಗ್ಸೆ? ಕಾಲು ಪರ್ವಾ ಇಲ್ಲಮ್ಮಾ ಯಾಕ್ ಬರ್ಲಿಲ್ವೋ ಇನ್ನೂ ಯಾರೂ?

[blows whistle and steps towards door.]

**ಈಕೆ** — ಹೆದರ್ಕೆ ಇದ್ರೆ ಬೇಡಾ ಮಗೂ! ಬೇಡ ಬೆಂಕಿ . ನಮ್ಗೆ ... ಲಭ್ಯವಿದ್ರೆ. .ಗಂಡಸ್ರು ಯಾರಾದ್ರೂ . .

**ಮಗೂ** — (indignantly) ನಾನ್ ಹೆಂಗ್ಸಲ್ಲಮ್ಮಾ..... ನಾನ್ ಗಂಡ್ಸು! ನನ್ಕಾಲ್ ಗಾನಾ ಸರೀಗಿದ್ದಿದ್ರೆ. ಬೆಂಕಿ ಆದ್ರೂನೂ ... ಕಿಟ್ಟಿ ಹೇಳಿಧಾನೆ. ಹೆಂಗಸ್ರೇ ಬೆಂಕೀಂದ್ರೆ ಬೆದರ್ತಿರಲಿಲ್ವಂತೆ.. ಕಿಟ್ಟೀಗಾನಾ ಈಗಿದ್ದಿದ್ರೆ?.....ಈಗ ನಾನ್ ಹೆದ್ರಿದ್ರೆ...... ಹೆಂಗ್ಸೂ ಅಂದ್ ಬಿಡುತಾನೆ ...ಗೊತ್ತು! ಹ್ಯಾಗಿದ್ರೂ ಬಂದೇ ಬಿಡ್ತಾನೆ. ಅ.. ಭಿ ..ತ... ಕ್ ... ಪ .....ಹಿ.....ಲ್ವಾ... .ಕ.. .ಭಿ..... ಸ್ಪೈ . ಹ.....ಟ.....ಯಾ [muttering, blows the whistle hysterically ; finding no immediate response enters the burning building]

[A sudden stream of men and women, and scouts, all shrieking and shouting

in coherently in questions asked; the forlorn family's answers given; is hushed by S.M's entrance, who takes in the situation and plants himself at the door of the burning building. ]

**ಸ್ಕೌಟು ಮಾಸ್ಟರ್** — Ranga Rao !...... ...run to the PoliceStation ! ......... Phoneoo ......... ....fire brigadeoo ! ಇಲ್ಲಿದ್ರೆ ಬಕೆಟ್ಸು, water hoseಉ........ ...ನರಸಿಂಹಮೂರ್ತಿ, ರಾಮಣ್ಣ, ರಂಗಣ್ಣ, ನೆರೆಹೊರೆಯೋರ್ಮನೆ..... ಚೊಂಬು .....ಬಿಂದ್ಗೆ......ಕೊಳಾಯಿ must be near !!.........

[ A number of Scouts press against him ]

**ಅಪ್ಪೂ** — Scout ಸಿಕ್ಕೊಂಡಿಧಾನ್ ಸಾರ್ ವಳ್ಗೇ!!

**ಸ್ಕೌಟು ಮಾಸ್ಟರ್** — ಹ್ಯಾಗ್ ಗೊತ್ತೋ ?

**ಅಪ್ಪೂ** — ಈಕೆ ಹೇಳ್ತಾರ್ ಸಾರ್ ! "ನಿಂಹಾಗೆ ಹಸುರ್ ರುಮಾಲ್ ಕಟ್ಟಿದ್ದ... ಚಿಕ್ ಹುಡ್ಗ... ..ಕುಂಟ್ತಾ ವಳಗ್ಹೋದಾಂತ. ಅಯ್ಯೋ ಮಗು ಸಾರ್ !.. .ರೆಸ್ಲಿಂಗ್ನಲ್ಲಿ ಏಟ್ ತಿಂದು, ... . ಅಷ್ಟೇ ಇರ್ಬೇಕ್ ಸಾರ್ .....ಮಗೂನೇ ಸಾರ್......ವಳಗ್ ಸಿಕ್ಕೊಂಡಿಧಾನೆ. ಸಾರ್ !..........

**ಸ್ಕೌಟು ಮಾಸ್ಟರ್** — ಮಗು ಆಗ್ಲಿ ಯಾರೇ ಆಗ್ಲಿ .....ಈಗ ಒಳಗ್ಹೋಗಿ ಬರೋದು hopelessoo !

[ puts his hand against door rigidly and blows whistle repeatedly ]

**ಅಪ್ಪೂ** — ರಾಘು ಲೇ, ಶಾಮೂ, ತಮ್ಮೂ, ಮಗು ಸಿಕ್ಕೊಂಡಿಧಾನೆ ಕಣ್ರೋ! ಕತ್ತೆಗಳ್ಹಾಗೆ ನೀವ್ ಬೇಕಾದ್ರಲ್ಲಿ ನಿಲ್ಲಿ......ನನ್ಕೈಲಾಗೋದಿಲ್ಲ! ನುಗ್ಗೀ ಬಿಡೋಣ ಒಳ್ಗೆ! S.M. or no S.M! ಬರ್ರೋ, ಹೆಣ್ಣ್ಕ್ಳ್ !

**ರಾಘು** — ಹೌದು ಸಾರ್....ಮಗು ಸಾರ್......ಗುಬ್ಬಚ್ಚಿ ಸಾರ್ .. ಸುಮ್ನಿರ್ಬಾರ್ದುರ್ ಸಾರ್ ನಾವು.

**ಸ್ಕೌಟು ಮಾಸ್ಟರ್** — (pushing them back and being pushed back) ತಪ್ಪೋ ಕಾಣ್ರೋ Fools!...... ಒಬ್ಬ್ರು ಸಾಯ್ತಿದ್ರು ನೀವೆಲ್ಲಾ ಸಾಯೋದ್ ತಪ್ಪೋ ಕಾಣ್ರೋ...... Get Back..... Get back !!

[All this while, thick flames of smoke have been issuing out of the door and an unequal struggle between a sensible S.M. and hot headed hysterical scouts goes on, with the S.M. being worn down, with a great gaping crowd of men and women around them, watching helpless and whispering inane platitudes. Suddenly, behind the scenes, Kitti's voice, first faint, but gradually growing stronger, is heard.

"ನಬಿಕತು ಘೋಡ್ಕೆವಾಃ !

ನಬಿಕೇ ಸಾತ್ ಫಿರ್ ನಿಕಲ್ಯಾವಾಃ !!

ಮೇರಿ ಷೇರಾಲಿ ..(ರಾಗ—ಮಾಂಡ್)

ಈ Engine markoo too Strongooಪ್ಪ.... ಇದು ನನಿಗ್ಸೇಡ. ಕರೀಂ ಬೀಡಿಯೇ ಬೇಕು.]

**ಕಿಟ್ಟಿ** — (in Panche and torn banian, with forehead ashed white, smoking a beedi) ಇದೇನ್ ಗಲಾಟೆ?...ಮನೆ....ಬೆಳ್ಕು...ಜನಗ್ಳು ಮಧ್ಯೆ ಹಯ್ಯೋ ಶುಕ್ಲಾಚಾರಿ...ತಕೋ ...ಎಲ್ಬಂದ್ರೂ ಇವನ್ ಸ್ವರೂಪ.

**ಸ್ಕ್ಯಾಟು ಮಾಸ್ಟರ್** — ಯಾರದು? ಕ್ರಿಷ್ಟ್ರಾವ್ !!

**ಕಿಟ್ಟಿ** — ಕ್ಷಮಿಸ್ಬಿ ಸಾರ್, ತಿರ್ಗ ಡ್ರಿಲ್ಲೂಂತ ನನಗ್ ಗೊತ್ತಿಲ್ಲ ಸಾರ್ ....ಕಿತ್ತ್‌ಹಾಕ್ಬಂಡೆ ಸಾರ್ ನನ್ ಯೂನಿಫಾರಂನ!

**ಸ್ಕ್ಯಾಟು ಮಾಸ್ಟರ್** — ಕ್ರಿಷ್ಟ್ರಾವ್! come here! ಬೆಂಕಿ, ಮನೆ, ನನ್ನ ತಳ್ಳಿಧಾರೆ ಹುಡುಗ್ರು help...help! ರಾಘೂನ್ ಗ್ಯಾಂಗ್ನ ಹಿಂತಳ್ಳೋಕೆ help help ಮಾಡು!!

**ಕಿಟ್ಟಿ** — ಏನ್ ಜಂಬದ್ಕೋಳಿ ಪಟಾಲಂ ಸಿಂಮ್ಮೇಲ್ ಕೈಯ್ಯೇ? (Jumps to S.M.'s side, pushing the crowd back) **ಇದು ಲಡತ್ತು ಸಾರ್!** (Fisting the faces pressing on him) ಹ್ಯಾಗಿವ್ಯೋ ಉಂಡೆಗ್ಳು?

**ಅಪ್ಪೂ**—ಮುಂಕೂ,ಲೇ! ಮಗು ವಳಗ್ ಸಿಕ್ಕೊಂಡಿಧಾನೋ?!

**ಕಿಟ್ಟಿ — ಮಗು ?....ವಳ್ಗೆ ?....**

**ಅಪ್ಪೂ** — ಹೂಂ, ಕಾಣೋ, ಅವನ್ನ ಎಳ್ಕೊಂಬರೋಕೆ **ಬಿಡೋದಿಲ್ಲ** ಎಸ್ಕೆಮ್ಮೂ!

**ಸ್ಕೌಟು ಮಾಸ್ಟರ್** — Hopeless ಕ್ರಿಷ್ಣಾವ್ ! ಒಬ್ಬ scoutನ save ಮಾಡೋಕ್ ಹೋಗಿ ಹತ್ತು ಸ್ಕೌಟುಗ್ಳು ಸಾಯೋದ್ ತಪ್ಪು !

**ಕಿಟ್ಟಿ** — (flaring up) ಒಳ್ಳೇ ತಪ್ಪೂ ಸಾರ್ !? ಮಗು ವಬ್ಬ ಸ್ಕೌಟ್ ಅಲ್ಲಾ ! Brigade Brigade ಏ ಅವ್ನುಸಾರ್ !

[ steps inside the door. ]

**ಸ್ಕೌಟು ಮಾಸ್ಟರ್** — (Grabbing Kitti's hand) ಕ್ರಿಷ್ಣಾವ್, ನೀನ್ ಹೊರಟ್ಹೋದ್ರ ಇವ್ರೆಲ್ಲಾ ನುಗ್ತಾರ್ ನಿನ್ನ ಹಿಂದೇ .. !

**ಕಿಟ್ಟಿ** — (turning round and facing the others) ಲ್ರೋ, ಮಗೂನ್ ತರೋದ್ ನನ್ನಭಾರ, ವಳಗ್ಗಿಳಕ್ ಬಂದ್ರೋ ಗರ್ದನ್ ಕತ್ತರಿಸ್ತೇನ ..ತೆಪ್ಪ ಇಲ್ಲೇ ನಿಂತಿರಿ.

[ is lost in the smoke ]

Enter some men and scouts with buckets and water and a few policemen too, chucking water at windows and doors and Exit through door and return.]

**Policeman** — ಒಳ್ಗ ಹೋಗೋದಾಗೋದಿಲ್ಲ ಸಾರ್, ಹೊಗೆ ಬಲ್ ಜಾಸ್ತಿ .. (looking at side—wing left) ಅಕೋ, Inspector ಬಂದ್ರು.

[ Enter more constables and Inspector ]

[Sound of a passing car stopped ; heard from within.]

**(a voice from inside)** — ಏನದ್ ಗಲಾಟೆ ವಿಚಾರಿಸ್ಕೊಂಬನ್ನಿ. Trouble ಏನು? (car engine stops)

**Another Voice** — ಚಿತ್ತ.

[Enter a gentleman, with turban, long black close-collar coat, white trousers and lace ಕವ್ಮರ್ ಬಂದ್]

**Gentleman** — (addressing Inspector) ಏನಿದ್ ಗಲಾಟೆ?.....(ಹತ್ತಿರಕ್ಕೆ ಹೋಗಿ Inspector ಕಿವಿಯಲ್ಲಿ ಗುಸುಗುಟ್ಟುತ್ತಲೇ, ಆತನು ಬೆಚ್ಚಿಬಿದ್ದು, ನೆಟ್ಟಗೆ ನಿಂತು ಹುಮಾಲು ಬಟ್ಟೆ, ನಡುಕಟ್ಟುಗಳನ್ನು ಸರಿಮಾಡಿಕೊಂಡು.)

**Inspector** — ಏನು ಇಲ್ಲೇ ಇದ್ದಾರ್ಯೇ?

**Gentleman** — ಹೌದು carನಲ್ಲಿ!

**Inspector** — Fall in!

[ Police ನವರು ಲೈನಾಗಿ ನಿಲ್ಲುವರು ]

**Inspector** — ' 'Shun ''

[ Policeನ ಲೈನು ನಿಷ್ಕಂಪವಾಗಿ ನಟ್ಟುಕೊಳ್ಳುವುದು ]

**ಸ್ಟ್ಯಾಟು ಮಾಸ್ಟರ್** — ಇದೇನ್ ಇನಿಸ್ಪೆಕ್ಟ್ರೇ ಡ್ರಿಲ್ಲು ಈಗ?

[ Inspector, S.M. ಕಿವಿಯಲ್ಲಿ ಗುಸುಗುಟ್ಟುವನು. ]

**ಸ್ಕೌಟು ಮಾಸ್ಟರ್—** (ಬೆಚ್ಚಿ ಬಿದ್ದು) Boys, Fall in !

[ ಸ್ಕೌಟು ಹುಡುಗರು ಪಂಕ್ತಿ ಪಂಕ್ತಿಯಾಗಿ ನಿಲ್ಲುವರು. ]

[ಇಷ್ಟರಲ್ಲಿ, ಇಲ್ಲಿಯ ವರ್ತಮಾನವನ್ನು ವಿಚಾರಿಸಿ ತಿಳಿದು ಕೊಂಡ ದೊಡ್ಡ ಮನುಷ್ಯರು ನಿಷ್ಕ್ರಮಿಸಿ, ಇಷ್ಟು ಹೊತ್ತಿಗೆ ಪುನಃ ಪ್ರವೇಶಿಸುವರು.]

**Inspector** — ಅಕ್ಕಪಕ್ಕದಿಂದ ನೀರೆತ್ತಿ ನಿಲ್ಸೋಕೆತ್ನ ಪಡ್ತಿದ್ದಾರೆ ನಿಲ್ಸೋದು ತಕ್ಕಷ್ಟಿಗೆ ಅಸಾಧ್ಯ.

***Chief Scout*** — (Entering) ಯಾಕೆ, Fire Brigade ಇಲ್ವೇ ಊರ್ಲಿ ?

**Gentleman** — ಇಲ್ಲ, ಮಹಾಸ್ವಾಮಿ municipality afford ಮಾಡೋದು ಕಷ್ಟ !

***Chief Scout*** — (Turns round, gravely accepting the salutations round him, advances) ಯಾರ್ ಮನೆ ಇದು ? lifeಗೇನಾದ್ರೂ danger ಏ ?

**Inspector** — ಇಲ್ಲ ಮಹಾಸ್ವಾಮಿ ! ಮನೇವ್ರು ಅಪ್ರ ಹೆಂಡ್ತಿ, ಮಗು, safe ಆಗ್ ಬಂದ್ಬಿಟ್ರು.

**ಅಪ್ಪೂ** — ಒಳ್ಳೇ lifeಗೆ danger ಇಲ್ಲ ! (to S.M.) Scouts ಸಿಕ್ಕೊಂಡ್ ಇದಾರೇಂತ್ ಹೇಳಿ ಸಾರ್. !

***Chief Scout*** — ಏನು ! Scouts ಸಿಕ್ಕೊಂಡಿದ್ದಾರೈ ವಳ್ಗೆ ?

**ಸ್ಕೌಟು ಮಾಸ್ಟರ್ —** advancing and saluting) ಹೌದು ಮಹಾಸ್ವಾಮಿ, ನಾವ್ ಬರೋಪ್ಪ್ರಲ್ಲಿ ಒಬ್ಬ scout ಹೋಗಿದ್ದ ಏನೋ property ನೋ ಏನೋ (doubtfully looks around him.)

**ಅಪ್ಪೂ —** ಮೊದ್ಲು ಮನೇಲಿದ್ದೋರ್ನ ಒಬ್ಬೊಬ್ಬರ್ನಾಗಿ rescue ಮಾಡ್ಬಿಟ್ಟು, ಆಮೇಲೇನೋ ದುಡ್ಡಿನ್ ಪೆಟ್ಗಿ ಇದೇಂತ ಹೇಳಿದ್ರು, ಅದನ್ ತರೋಕ್ ಹೋದ್ನಂತೆ! ಆಮೇಲಿನ್ನೊಬ್ಬ scout ಹೋದ!

**ಸ್ಕೌಟು ಮಾಸ್ಟರ್ —** ಅಷ್ಟು ಹೊತ್ತೀನೆ enter ಮಾಡೋದು fataloo ಅಂತ ನಿಶ್ಚಯಿಸಿಕೊಂಡು ತಡೀತಿದ ನನ್ನೇ ತಳ್ಬಿಟ್ಟು ಹೋದ ಆ ಹುಡ್ಗ . . !

***Chief Scout*** — ಏನು? ನಿಮ್ಮನ್ ತಳ್ಬಿಟ್ಟು. . . .? ಹುಡ್ಗ . ? (to Appu) ಏನು, Fellow scoutನ rescue ಮಾಡೋಕೆ?

**ಅಪ್ಪೂ —** Scout ಅಂಬೋ . . ಅಂಬೋದೊಂದೇ ಅಲ್ಲ Sir ಮಗು ಮೊದ್ಲು ಹೋದೋನು ಚಿಕ್ಕ ಹುಡ್ಗ . . ಚಿಕ್ scoutoo . . . ಚಿಕ್ಕ ಕಬ್ಬು . . . ರೆಸ್ಲಿಂಗ್‌ನಲ್ಲ ಕಾಲ್ ಬೇರೆ ಮುರ್ಕೊಂಡ ಇವತ್ತು ಅವ್ನೇ ಮೊದಲ್ ಹೋದ್ದು (pointing to couple) ಇವರ್ನ್ನು, ಇವರ್ ಕೂಸಿನ್ನೂ, ಒಬ್ಬೊಬ್ಬರ್ನಾಗಿ ಹೊರಕ್ಕ ಸಾಗ್ಸಿ, ಇವರ್ ದುಡ್ಡಿನ್ ಪೆಟ್ಗಿ ತರೋಕೆ! ಆಮೇಲೆ ಪ್ರೋಲಿ . ಕಿ . ಅಲ್ಲ . . ಆ . ಎರಡ್ನೆಯೋನೂ ಒಳಗ್ಗೆ ಹೋದದು ಮಗೂಂತ್ ತಿಳೀತ್ಲೂನೂವೆ ನಮ್ಮನ್ನೆಲ್ಲಾ ದಬಾಯಿಸ್ಬಿಟ್ಟು,

ವಳಗ್ ನುಗ್ಗಿದ್ದು ಅವರ್ ಮುದರ್ಗೆ ಮಾತ್ ಕೊಟ್ಟಿದ್ದ ಮಹಾ ಸ್ವಾಮಿ !

*Chief Scout* — ಯಾಲ್ ಮುದರ್ಗೆ. ಏನ್ ಮಾತು ? ಯಾರು ಕೊಟ್ಟಿದ್ದು !

**ಅಪ್ಪಾ** — ಆ ಚಿಕ್ಕ ಹುಡುಗ್ನ ಮುದರ್ಗೆ ದಿನಾ ಮಗೂನ ಮನೇಗ್ ತಂದ್ ಸೇರಿಸ್ತೀನೇಂತ ಒಪ್ಕೊಂಡು ದಿನಾ ಕರ್ಕೊಂಡ್ ಹೋಗಿ ಅವರ್ ಮನೇಲಿ ಬಿಟ್ಟಿದ್ದ... ಇವತ್ತು ಮಗೂ **ವಳ್ಗಿಧಾನೇಂತ** ತಿಳೀತ್ಲ್ಲಾವೆ. ಹ್ಯಾಗಾದ್ರೂ......

*Chief Scout* — ತ್ಸು ! ತ್ಸು ! ತ್ಸು ! ಬೆಂಕಿ ಬಿದ್ದ ಮನೇಗ್ ಮೂರ್ ಸಲ ನುಗ್ಗಿ ಮೂರ್ ಲೈವ್ಸ್ ಸೇವ್ ಮಾಡಿ, ತಿರ್ಗ್ಗಿ ನುಗ್ಗಿದ್ನೇ? cub ಏ ಯಾರದು ದುಡ್ಡ್ ತರೋಕೆ?...... ಯಾರ ದುಡ್ಡು ?

**ಮನೆಯಾತ** — ಸಂಡು ಮಹಾಸ್ವಾಮಿ ಕ್ಷಮಿಸ್ (ಪಳಲುಪ ಕ್ಷಮಿಸಿ, ಆಗಲಾರದೇ ತಿರುಗಿ) ...

ಒಬ್ಬ Scout — ರೋಗಿ, ಮಹಾಸ್ವಾಮಿ !

*Chief Scout* — (ರೋಗಿಗೆ) ಸರ್ತ್ಯಾ ಇಲ್ಲಿ ಮಲ್ಗೀಡಿ ... ಕೂತ್ಕೊಳ್ಳಿ.

**ಮನೆಯಾಕೆ** — (ಗಂಡನಿಗೆ) ಅಯ್ಯೋ ಹೇಳೀಂಪ್ರಿ ! ಏನು ತಿಳ್ಕೊಂಡಿದ್ದಾರಾತ "ತಾಸ್ ಬೀಳೋಕ್ ಬೆದ್ರಿ ಕಂಡೋರ್ ಮಗೂನ ಬೆಂಕೀಲಿ ಬಚ್ಚಿಡ್ತಾರೆ" ಅಂದ್ಕೊಂಡಿದ್ದಾರು. ಹೇಳೀಂದ್ರಿ. ಹೆದರ್ಬೇಡಿ !

**ಮನೆಯಾತ** — ಕ್ಷಮ್ಸಿ, ಮಹಾಸ್ವಾಮಿ—ಮುದ್ಕ....ನಾನ್ ಕೂಡಿಹಾಕಿದ್ದ ದುಡ್ಡೆಲ್ಲಾ ಇತ್ತಾ ಪೆಟ್ಗೇಲಿ....ಇಲ್ಲೇ ಹತ್ತಿರ್ದಲ್ಲೇ ಇತ್ತೂ....ಅಪಾಯವೇನೂ ಇಲ್ದೆ....ಹೆದರ್ದೆ....ಹೋದ ಆ ಹುಡ್ಗನ್ ಧೈರ್ಯದಿಂದ....ಮೋಸ ಹೋದೆ ಮಹಾಸ್ವಾಮಿ! (ಬಿಕ್ಕಿಅಳುವನು.)

*Chief Scout* — ಹೌದು!? ಅಷ್ಟು ದುಡ್ಡೂ ಪೆಟ್ಗೇಲಿ ಹೋದ? ಈಗ ಆ ಮಗು....ಇನ್ನ ಅವನ ಮುದರ್ಗೆ ಮಾತ್ ಕೊಟ್ಟೇಂತ ಇನ್ನೊಬ್ಬ........ಒಳಗೆ ಸಿಕ್ಕೊಂಡಿಧಾರೆ....! (to Inspector) Inspector, can nothing be done?

**Inspector** — Everything that is possible is being done, Sir!..detached houseoo.. neighboursಗೇನೂ ಅಪಾಯ್ವಿಲ್ಲ. ಹಿಂದ್‌ಗಡೆ ನೀರ್ ಎರ್ಚ್ತಿದಾರೆ! ಆದ್ರೆ ಈ scoutsನ rescue ಮಾಡೋದು, (drops his eyes) ಸ್ವಲ್ಪ

*Chief Scout* — How awful!!?.. Two scouts being roasted alive! (ನಿಟ್ಟುಸಿರುಬಿಡುತ್ತಾ) ಸುಮ್ನೇ ನಿಂತ್ಕೊಂಡ್ ಹ್ಯಾಗೆ watch ಮಾಡ್ತಿರೋದು? ನಾವ್ ನಾವುಗ್ಳು comfortableಆಗಿರೋವರ್ಗೂ everything is all right around usಊ ಅಂತ ಸುಮ್ನಿದ್ದ್ ಬಿಡ್ತೀವೆ....ಥಟ್ಟಂತ ಹೀಗೇ ನಾದ್ರೂ ಒಂದು happen ಆಗುತ್ತೆ ಆಗ್ ಗೊತ್ತಾಗುತ್ತೆ, ನಮ್ಮ helplessnessoo .....awful! (His eyes seem to suddenly hear something inside the house) ಏನದ್ scuffleಉ!? ನೋಡಿ! ಎಲ್ಲ್ರೂ ಹೋಗ್‌ಬೇಡಿ..... ಸ್ವಲ್ಪ ನೀರೆರ್ಚಿ ಆ smoke clear ಆದ್ರೆ ಒಳಗ್ಗೆ ಕಾಲಿಡಿ!

ಏನೋ steps ತೇಳಿಬರುಕ್ಕೆ (moves forward to the door himself.)

**Scout Master and Inpector** — ಕ್ಷಮಿಸಿ, ಮಹಾಸ್ವಾಮಿ! ತಾವು ಹೀಗೆ ಬರ್ಬೇಕು.

***Chief Scout*** — (Indignantly) **ನಾನಿರ್ಲೇಂದ್ರೆ ಅಲ್ವೋಡಿ !**

A few of the Scouts, who have gone out and returned with buckets of water, go a step into the door, and emptying the buckets in the air Re-enter

**The two scouts** — (In excited tones, but breathing hard us though choked by the smoke) ಬತೀರ್ರೋ ಹಾಗಡೆ ಯಾರೋ

[Every body looks expectantly and with held breath at the door Poli Kitti with Magu on his shoulder—The latter hugging tightly asteel deed box—stumbles out of the door and falls helplessly. The Chief Scout himself rushes forward, catches Magu in his arms and gently lowers him and Kitti to the floor. The scouts rush forward, some fanning the faces of the victims, others using artificial respiration, whilst one or two run out

with buckets for water. A gentleman moves out of the crowd, which has hitherto been standing all struck and quiet, towards the victims.]

**Gentleman** — I am a doctor......ದಾರಿ ಬಿಡಿ !

***Chief Scout*** — ಯಾರು ?, ಡಾಕ್ಟ್ರೇ ? Will you please......examine these boys, doctor ?

**Doctor** — Yes, Your Highness! (bends down ; loosens the collar of Magu, puts his ear to the heart ; with a relieved look) ಪರ್ವಾ ಇಲ್ಲ, ಮಹಾಸ್ವಾಮಿ, serious ಏನೂ ಇಲ್ಲ ಸ್ವಲ್ಪ open airಏ ಸಾಕು restoringಗೆ ಅಂದ್ರೆ ...ಕಾಲ್ ಮಟ್ಟಿಗೆ .... seriously burnt ಉ..... shift ಮಾಡ್‌ಬಿಡ್ಬೇಕು at once ಉ. to the hospital !

***Chief Scout*** — Certainly ! .. ನಸ್ ಕಾಂಧ ! ಯಾರ ಮಗು ಇದು ?

**ಸ್ಕೌಟು ಮಾಸ್ಟರ್** — Mr. ರಾಮಣ್ಣೋರ ಮಗು ; assistant commissioner ರಾಮಣ್ಣೋರು !

***Chief Scout*** — Take him home doctor, and on to the hospital from there, if you think it best ! . ಹೌದೂ? ...ಆ ಇನ್ಸ್‌ಪೆಕ್ಟ್ರು ಕಂಡ್ರ ?

**Doctor** — (bending over Kitti, shaking him and putting his ear over his heart for a second, gets up) ಪರ್ವಾ ಇಲ್ಲ ಮಹಾಸ್ವಾಮಿ....Strong boy! .. ಸ್ವಲ್ಪ cold waterಉ ಸ್ವಲ್ಪ artifical aidಉ ಸಾಕು! in the mean while. (looking around him, will somebody help me? [ bends down and lifts Magu, who is carried away by a few scouts ]

***Chief Scout*** — (to S.M.) ಹೌದೂ? ಈ ಮಗು father ಯಾರು? ಯಾವ ಸ್ಕೂಲು?

**ಸ್ಕೌಟು ಮಾಸ್ಟರ್** — ತಂದೆ ಯಾರೋ ಗೊತ್ತಿಲ್ಲ ಮಹಾಸ್ವಾಮಿ!.. ಸ್ಕೂಲು? ಅವನೇನೂ ಓದೋ type ಅಲ್ಲಾಂತ ಕಾಣುತ್ತೆ.

***Chief Scout*** — (bewildered and indignantly) Father ಗೊತ್ತಿಲ್ಲ! ಓದೋ type ಅಲ್ಲ! . ಆ ಹುಡಗ್ನ father ಗೊತ್ತು !, ಈ ಹುಡುಗ್ನ father ಗೊತ್ತಿಲ್ಲ! **ಈ ಮಗು ತಂದೆ assistant commissioner ಅಲ್ವೇನೊ?** ಈ ಮಗು. ಯಾವ ಸ್ಕೂಲು?......ಅಲ್ಲ ...ಯಾಕ್ ಹೋಗೋದಿಲ್ಲ? ....ಸ್ಕೂಲ್ಗೆ ? (ಇತರರಿಗೆ) ನಿಮಗೆ ಯಾರಿಗಾದರೂ ಗೊತ್ತೆ?

**ಅಪ್ಪೂ** — Father oldoo ಸಾರ್!... ಪೂರು . mother ಉ ಇಲ್ಲ. sister widow ..Sixth formನಲ್ಲಿ ಓದ್ತಿದ್ದ! discontinue ಮಾಡ್ಬಿಟ್ಟ.. circumstances ಊ!!

*Chief Scout* —ತ್ಸ! ಎಷ್ಟ್ ದಿನಾಂತ ಈ circum stancesಊ circumstancesoo ಅಂಬೋ ದೆವ್ವ Stateಗೆ robಮಾಡ್ತಿರೋದು ಇಂಥಾ noble children's serviceನ? ಇನ್ನಿಗೇನ್ ನಷ್ಟ? . ಒಂದು khushy joboo......ಒಂದ್ ಬಂಗ್ಲೆ . one American car ಊ! ಒಂದು pension to prevent chances of further workoo! precious little lost!...But the State cant afford to ignore him, and his name is legion.....(turning to S.M. and in Sad almost irritated indigna-tion) ಕ್ಷಮ್ಸಿ! . ನಿಮ್ಮ rank ಉ, designation ಉ! ನೀವೇನು subaltern ಏ . major ಏ ಕರ್ನಲ್ಲೇ? ಲೆಫ್ಟಿ ನೆಂಟೇ....ಕ್ಯಾಪ್ಟನ್ನೇ?.......

**ಸ್ಕೌಟು ಮಾಸ್ಟರ್** — (Standing at attention) ಸ್ಕೌಟ್ ಮಾಸ್ಟರು, ಮಹಾಸ್ವಾಮಿ!

*Chief Scout* — ಈ ಹುಡ್ಗ ಯಾರು, ಏನು........ ಇವನ್ಗೆ educational facilities ಏನಾದ್ರೂ ಒದಗ್ಸೋದ್ ಹ್ಯಾಗೆ? ಏನಾದರೂ ವಿಚಾರ ಮಾಡ್ತೀರಾ?

**ಸ್ಕೌಟು ಮಾಸ್ಟರ್** — ಚಿತ್ತ ಮಹಾಸ್ವಾಮಿ........ಅವನ್ ಸೇರಿ ಇನ್ನೂ fortnight ಕೂಡ ಇಲ್ಲ. ಅದಕ್ಕೇ ಅವನ circumstancesಉ ತಿಳ್ಕೊಳ್ಳೋಕೆ... ..

*Chief Scout* — ಏನ್ fortnight ಕೂಡ ಆಗಲಿಲ್ವೇ ಸೇರಿ?

**ಸ್ಕೌಟು ಮಾಸ್ಟರ್** — ಹೌದ್ ಮಹಾಸ್ವಾಮಿ!

*Chief Scout* — Fortnight service ಕೂಡ ಇಲ್ದೆ "*Be prepared unto death to succour the distressed*" ಅಂಬೋ ನಂ Mottoನ ಇವತ್ತ್ ರಾತ್ರಿ uphold ಮಾಡಿದ ಹುಡ್ಗನ್ಗೆ (restlessly sighing)......Some mark of recognition...... (looking about himself up, his eyes suddenly gleam and rest upon his heavy wristlet watch ;......snatching it off his wrist, he clasps it round the wrist of the still prone boy.—The series of movements is an impulsive but none the less deliberate noble gesture.—Rising up dignifiedly he steps back a pace or two)...................................... Give him more air......Is he coming to ?

**A Scout** — ಹೌದ್ ಮಹಾಸ್ವಾಮಿ ! Breathing regular ಆಗ್ತಾ ಇಧೆ ! (dashes successive handfuls of cold water on Kitti, who slowly opens his eyes and glares around at those who are rendering first aid.)

**ಕಿಟ್ಟಿ** — (Shaking them off roughly) ಯಾಕ್ರೋ ಲ್ರೋ......ಏನು ಯಾತಾನೇನ್ರೋ ನನ್ ಕೈಗ್ಳ, ಹೀಗ್ ಹಲಾಯ್ಸೋಕೆ ?......ಯಾರಿಂದು......ಅಪ್ಪು......ಜಂಬದ್ಕೋಳಿ...... ಎಲ್ಲಿಧೀನ್ರೋ ......?...... (ಸುತ್ತಮುತ್ತಲೂ ನೋಡಿ) ಹೌದು ! ಬೆಂಕಿ ಬಿದ್ದ ಮನೆ......S.M.ಉ......ಲಡತ್ತು......(ಏಳುತ್ತಾ) ಮುಗು......ಮುಗು ......**ಮುಗು......ಮುಗು !!!?**..........(ಅಪ್ಪುವಿಗೆ) ಆಪ್ಪೂ, ಲೇ.....!

ವಳ್ಗಿಥಾನೋ ಮಗು .....ಗುಬ್ಬಚ್ಚಿ.....ಬೇಯ್ತಿಥಾನೋ ವಳ್ಗಿ.......... ಅವ್ರಮ್ಮ ಅದರ್ತಿರ್ತಾಳೆ ಮನೇಲಿ! (Struggles to get up)

**ಅಪ್ಪೂ** — (Forcing him down and dropping to his knees and tenderly nursing Kitti's brow and hair) ಇಲ್ಲ, ಕಿಟ್ಟೀ!.......... ಎತ್ಕೊಂಬಂದ್ಯಲ್ಲಾ ನೀನೇ.....ಗುಬ್ಬಚ್ಚೀನ.....ಜ್ಞಾಪಸ್ಕೋ ....ಜ್ಞಾಪಸ್ಕೋ !!

**ಕಿಟ್ಟಿ** — (Gently) ಅಪ್ಪು ಲೇ, ಯಾಕೋ ಸುಸ್ತು ಕಾಣೋ ನಾನು.....ಭಿರ್ಯಾಯಿಸ್ತಿಥೆ ನನ್ಭೇಜ.....ಎಲ್ಲೋ ಮಗು..... ಮನೇಗ್ ಸೇರಿಸ್ಬೇಕೋ ನಾನು..........ಕಾದಿರ್ತಾಳವರಮ್ಮಾ...... ..... ಆವರಮ್ಮ ಸತ್ತ್ ನಮ್ಮಮ್ಮನ್ ಜಾತಿ ಕಾಣೋ! (Shoots up to a sitting position and shooting his glances around) ಮಗು ಎಲ್ರೋ.....ಲ್ರೋ! ?

**ಅಪ್ಪೂ** — ಮನೇ ಸೇರ್ಬಿಟ್ಟ ಕಿಟ್ಟೀ!....

**ರಾಘು** — ಕಾರ್ನಲ್ಹೋದ..... ಕಿಟ್ಟೀ!

**ಕಿಟ್ಟಿ** — ಕಾರ್ನಲ್ಲೋ! (laughing in hysterical sardony) ಹ! ಹ!! ಹ!!!.....ನಂ ಗುಬ್ಬಚ್ಚಿ! (sarcastically)!.....ಮರ್ತ್ರೆ...........ದೊಡ್ಮನುಷ್ಯರ್ ಜಾತಿ . ........(his eyes suddenly catch the gleams of the gold wristlet and gleam in surprise, suspicion, and danger. And in tones, tearful, but full of fury) ಇದ್ ಹ್ಯಾಗ್ಬಂತ್ ನನ್ಕೈಲೀ ಈಗ.....? (laughing hysterically).....ಥಕೋ, ಮೊದ್ಲೇ ಪೋಲಿ!.....(darting glances around, and fixing on the Inspector)

*

ಪ್ಪೋಲೀಸ್ನೋರು! (his eyes suddenly light on the prone owner of the burning house)...... ನಿಮ್ದೇನ್ರಿ ಇದು?......ಉರೀತಿದ್ದ್ ನಿಂ ಹಾಳ್ಮನೇಗೆ ನುಗ್ಗಿ......ಇದನ್ ಕೈಗ್ ಹಾಕ್ಕೊಳ್ಳೋಕೆ ಬಿಡ್ತಿತ್ತೇನ್ರಿ?......(turns to S.M.) ನೀವಾದ್ರೂ ಹೇಳಿ ಸಾರ್ ಬರೋವಾಗೇನೂ ಇರ್ಲಿಲ್ಲ ಕೈಲಿ ಅಂತ! (running his fingers through his hair with dazed look and voice) ನಿಮ್ಮನ್ನ ಇವರ್ ದಬಾಯಿಸ್ತಿದ್ದ್ದ್ ಯಾದು......ನಿಂ ಪಕ್ಕದಲ್ಲಿ ನಿಂತು ಕುಮ್ಮಕ್ಕ್ ಕೊಡ್ತಾ ಲಡತ್ ಮಾಡ್ತಿದ್ದದ್ದ್ಯಾದು......ನೀವ್ ಕೂಗಿದ್ಯಾದು......ಗುಬ್ಬಚ್ಚೀನ್ ಬಚಾಯ್ಸೋಕ್ ನುಗ್ಗಿದ್ದ್ಯಾದು! ಅಪ್ಪು ಎಬ್ಸಿದ್ದ್ಯಾದು...... ಈ ಗಲಾಟೇಲಿ ಇದನ್ ಲಪ್ಟಾಯ್ಸಿ ಕೈಗ್‌ಲಗಾಯಿಸ್ಕೊಳ್ಳೋಕೆ ಎಲ್ಲಾರ್ ಬಿಡ್ತು? (to himself as he unclasps the watch, agonised and sardonically) ಇದೊಂದೇ ಕಮ್ಮಿ ನಂ ಅಪ್ಪಿಗೆ! ಮನೆಯೆಲ್ಲಾ ಹಾಳಾಗ್ಹೋಗಿ ಮಗ್ನೂ ಕಳ್ತನ ...?

*Chief Scout* — ಅಲ್ಲ! ನಿಂದು ಮಗು..... ಅದು ನಿಂದು!

**ಕಿಟ್ಟಿ**— ಮಗು......ನಾನಲ್ಲಸರ್!......ಮಗು ಆ ದೊಡ್ಮನುಷ್ಯರ್ ಮಗ (sardonically)..........ಕಾರಲ್ಹೋದೋನು ...ನಾನ್ಮಗು ಅಲ್ಲ......ನಾಲ್ಲು......ಪೋ......ಅಲ್ಲಾ ......**ನಾನ್ ನಾನೇ**.

*Chief Scout*— ಗೊತ್ತೂ ಮಗು......ಅದ್‌ನಂದು ......ನಾನೇ ನಿನಗ್ ಕೊಟ್ಟದ್ದು.

**ಕಿಟ್ಟಿ** — (blazing in anger and suspicion, flinging the watch towards the Chief

Scout along the floor, like boys play ducks and drakes with a Slab of Slate on water) ಯಾಕ್ಸಾರ್? ನೀವ್ಯಾಕ್‌ಸಾರ್ ನನಗೆ ಕೊಡ್ಬೇಕು watchನ?......ನಿಮ್ಗೇನಂಥಾ ದೋಸ್ತಿಸಾರ್ ...... ನನ್ನೊಂದ್ಗೆ......?

**ಅಪ್ಪೂ ಮುಂತಾದ ಸ್ಕೌಟುಗಳು** — (ಮುಚ್ಚಿಕೊಂಡು) ಹುಚ್ಚ್ಮುಲೇ, ಹುಷಾರೋ, ! Chief Scout ಕಣೋ, ಬೆಪ್ಪ !

**ಕಿಟ್ಟಿ** — Chief Scout ಊ?

**ಅಪ್ಪೂ** — Highness ಕಣೋ! !

**ಕಿಟ್ಟಿ**—Highnessಊ?......Rally! ?......ಡೆಲ್ಲಿ......ದೂ ದ್ ಫೇಡ......ಮೂಮ್ರ್ಟಿನ್ನು......ಇವ್ರೇನೆ?

***Scouts*** — (in hushed tones) ಹೌದುಕಣೋ!

**ಕಿಟ್ಟಿ** — ಹಾಳಾಗ್ಹೋಯ್ತು! ಹಾಗಾರ್ದ್ರ ಚಾನ್ಸೇನ್ನು next rally ಯಿಂದ! ತ್ಸು! ತ್ಸು...... ತ್ಸು! ತ್ಸು! ಅಲ್ಲ ನನ್ನ ಕಿಸ್ಮತ್ ನೋಡ್ರೋ......ಮುಚ್ಕೊಳ್ರೋ ನನ್ನ......ಅಪ್ಪುಲೇ ನೀನಾದ್ರೂ S. M. ಗೆ ಹೇಳಿ......Highnessಗ್ರ—Chief Scoutಗ್ರ ಸೂರತ್ತಿನ್ ವಾಕೀಫ್ ಇಲ್ದೆ......ಫ಼ಾಚ್ನ ಭಿಕರ್ಾಯಿಸ್ದ ಬೇವಕೂಫು ......" ಇನ್ನೂ Boy Scout ಬಾಬತ್ತ್ನಲ್ಲಿ ಬಚ್ಚ......ಅವನ್ಗೆ ಈ ಬಾಬತ್ನಲ್ಲಿ ತಜ್ರೂಬ್ ಇಲ್ಲ....Rally ಹೊತ್ಗೆ ಥೇಟಾಗಿ ತಮ್ಕೈಲಿದ್ದ ವಾಚ್ನೂನೂ ಕಸ್ಕೊಳ್ಳೋ ಅಷ್ಟು ತಯಾರಿ ಕೊಡ್ತೇನೇ"ಂತ ಷಿಫಾರಸ್ಸು ಮಾಡ್ಸೋ; ! ಈಗ ಹಿಂದ್ಹೇಟ್ ಹೊಡದ್ಯೋ (ಮುಷ್ಟಿಗಳನ್ನು ಬಿಗಿದು) ನಂ ಕಲೀಫ್ರಿಗೆ ಕುಮ್ಮಕ್ಕ್ ಕೊಟ್ಟದ್ಯಾದ್ಮಾಡ್ಕೊ!

[ Scoutಗಳು ಕಿಟ್ಟಿಯನ್ನು ಎಬ್ಬಿಸಿ ನಿಲ್ಲಿಸುವರು ]

*Chief Scout* — ಮಗೂ, ಇಲ್ಬಾ......ನಿನ್ನ ಹೆಸ್ರೇನು?

**ಕಿಟ್ಟಿ** — ( ತಡವರಿಸುತ್ತಾ ಮುಂದೆ ಬಂದು, ಅಧೋದೃಷ್ಟಿಯಿಂದ ) ಪ್ರೋ......ಅಲ್ಲಾ......ಕಿಟ್ ಅಲ್ಲಾ......

**ಸ್ಕೌಟು ಮಾಸ್ಟರ್** — ಕೃಷ್ಣಾರ್ರಾವ್!......ಇಲ್ಬಾ ಕೃಷ್ಣಾರ್ರಾವ್!

[ ಕಿಟ್ಟಿಯು ಮೊದಲು ಕೈಮುಗಿದು, ಮತ್ತೂ ಮುಗಿಯಲು ಜೋಡಿಸಿದ ಎರಡು ಹಸ್ತಗಳಿಂದಲೂ ಸಲಾಮನ್ನು ಮಾಡಲುದ್ಯುಕ್ತಿಸಿ......ಹೇಸಿ ಹಸ್ತಗಳನ್ನು ಹಿಸುಕುತ್ತಾ ತಡವರಿಸಿ ಮೆಟ್ಟಿಯುವ ರಾಜರನ್ನು ಸಮಿಾಪಿಸುವನು ]

*Chief Scout* — ನಮ್ಮ brother-hood ಗೆ ನೀನು ಸೇರಿ ಹದ್ನೈದ್ ದಿವ್ಸಗ್ಳು ಕೂಡ ಆಗಿಲ್ಲವೆಂದು ನಿಮ್ಮ S. M. ತಿಳಿಸ್ತಾರೆ.

**ಕಿಟ್ಟಿ** — ( ಕೈಮುಗಿಯುತ್ತಾ ) ಹೌದು......ಸಾರ್............ ಹೈನೆಸ್‌ಗೈ......ಶುಕ್ರ......S.M. ಗ್ಳು, ಹೇಳೋದ್ ಸತ್ಯ (ಕಣ್ಣುಗಳನ್ನು ಇಳಿಸಿ ಎಡಗೈಯಿಂದ ಬಲಗೈನ ಬೆರಳುಗಳನ್ನು ಮಡಿಸಿ ಎಣಿಸುತ್ತಾ) ನಾನ್ ದಾಖ್ಲಾದ್ದು ಶನಿವಾರ......ಇವತ್ತು ಶನಿವಾರ......ಶನಿಯಿಂದ ಶನಿಗೆ ಹದ್ನೈದು......ದಿವ್ಸ......answer correct ಉ......ಅಲ್ಲ...... ನಿಜ......ನನ್ನ ಸರ್ವಿಸ್ಸು......ಸ್ಕೌಟ್ ಪಟಾಲಂನಲ್ಲಿ......(ಅರ್ಧಾತ್ಮಗತಂ) ಇದೇನ್ ಸರ್ವಿಸ್ ಲೆಖ್ಖಾಚಾರ ಈಗ? ಟೆನ್ನುಗ್ಳಿಗೆ......ಅಲ್ಲ rally ಗೆ ಸರ್ವಿಸ್ಸಿನ್ ಲೆಖ್ಖಾ ಇಲ್ಲಾಂದ್ನಲ್ಲಾ ಅಪ್ಪ?......(ಆತ್ಮಗತಂ) ಅದ್ಯಾಕೋ ಈಗಾಮಾತು?

*Chief Scout* — Scout-brother-hoodಲ್ಲಿ ಇಷ್ಟು short time ಇದ್ದಿದ್ರೂನೂ, ಸ್ಕೌಟ್‌ಗೈ purpose......

ಅನ್ಯೋಽಪ್ಕಾರಾಂಬೋಽದ್ನ ತಿಳ್ಕೊಂಡು ನಿನ್ನ ಪ್ರಾಣಭಯಾನೂ ಬಿಟ್ಟು, ಬೆಂಕೀಽಂತ್ಲೂ ನೂ ಬೆದರ್ದೆ ನೀಽನೀಽರಾತ್ರೆ ನಮ್ಮೆಲ್ರ ಎದುರಿಗ್ ತೋಽರ್ಸಿದ ಅದ್ಭುತ ಧೈರ್‍ಯಸ್ಥೈರ್ಯಗಳಿಗೆ, scout brother hood ಪರ್‍ವಾಗಿ ನಾನ್ ಸಂತೋಽಷಪಡ್ತೀಽನೆ.

**ಕಿಟ್ಟಿ** — (ಮಹಾಸ್ವಾಮಿಗ್ಳು ಮೇಽಲಿನಂತೆ ಹೇಽಳುತ್ತಿರಲು ಕೈಮುಗಿದುಕೊಂಡು, ಸ್ಕೌಟುಗಳೂ, ಪೊಲೀಽಸ್ ಹುದ್ದೇಽದಾರರೂ, ತುಂಬಿತುಳುಕುವ ಜನಕೂಟವೂ, ಉಸಿರು ಹಿಡಿದು ಸ್ತಬ್ಧರಾಗಿ, ಕೇಽಳುತ್ತಿದ್ದ, ನಿಶ್ಶಬ್ದ ಸನ್ನಿವೇಽಶಾವೇಽಶದಲ್ಲಿ ಬಿದ್ದು .....ಆಧಾರ್ತ್ಮಗತಂ) ಪಡೀಽಸಾರ್ .....ಅಲ್ಲ ಹೈನೆಸ್ಸು ಗ್ಳೇ......ಪಡೀ......ಪಡೀ......

*Chief Scout* — ಈ ನಮ್ಮ ಸಂತೋಽಷವನ್ನು ಇನ್ನು ಮುಂದಕ್ಕೆ ನಿನ್ನ ಆಯುಃ ಕರ್ವದಲ್ಲಿ ನಮ್ಮ scouts brotherhoodನ "ಪರೋಽಪಕಾರಾಯ ಇದಂ ಶರೀಽರಂ" ಎಂಬ ನಿಮಿತ್ತವನ್ನು ಪ್ರದರ್ಶಿಸಿ ನಮ್ಮ ವಿಶ್ವಸಂಘಕ್ಕೆ ಗಣ್ಯತೆಯನ್ನು ತರುವೆ ಎಂಬ ಭರವಸೆಯನ್ನು ನಮಗೆ ಪ್ರದರ್ಶಿಸಿ, ನಿನಗೂ ಮುಂದಕ್ಕೆ ಜ್ಞಾಪಿಸುವ ಹಾಗೆ, ಕೊಡುವ, ಈ (putting out his watch) ಪಾರಿತೋಽಷಕವು ನಿನ್ನ ಕೈಯಲ್ಲಿಯೇಽ ಯಾವಾಗಲೂ ಇರಲಿ.

**ಕಿಟ್ಟಿ** — (ಗೊಣಗುಟ್ಟುತ್ತಾ) ಇರ್ಲಿ......ಮಹಾಸ್ವಾಮಿ...... ಇರ್ಲಿ ! (ಗೊಣಗುಟ್ಟುತ್ತಾ, ಬೆದರಿ, ಅಪರಾಧಿಯು ನಾಚಿ ನಿಲ್ಲುವಂತೆ, ತಲೆಬಾಗಿ ನಿಲ್ಲುವನು)

[Sound of, a car stopping is heard within]

*Chief Scout* — Scout master! It is late in the night; please see to it that the boy

is really all right and gets home to his anxious parents.

[The Gentleman in attendance reverentially approaches the Chief Scout and whispers]

*Chief Scout* — ಕಾರ್ ಬಂತೆ? .... ಆ little boy ಇ? (Putting his ear out) That's good! Inspector!

**Inspector** — Fire ಆರ್ಸಿದ್ದಾಯ್ತು ಮಹಾಸ್ವಾಮಿ! ಹಿಂದ್ಗಡೇಯಿಂದ!......detailsಊ ಬೆಳಿಗ್ಗೆ ಸರಿಮಾಡ್ಬಿಡ್ತೇನೆ.

*Chief Scout* — ಹೌದೂ ಈ family......?

**Inspector** — ರಾತ್ರೆ ಇಲ್ಲೇ ಮನೇ ಮುಂದಿನ್ ಕೋಣೇಲಿ ತಂಗಬಹುದ್ದು comfortable ಆಗಿ......ಮಿಕ್ಕ ವಿಷ್ಯಗಳ್ನೆಲ್ಲಾ ನಾನೇ ಬೆಳಿಗ್ಗೆ attend ಮಾಡ್ತೇನೆ ಮಹಾಸ್ವಾಮಿ! [ರಂಗಸ್ಥಳದ ಮತ್ತೊಂದು ಸ್ಥಳದಲ್ಲಿ ಸೌಟುಮಾಸ್ಟರು ಮತ್ತು ಸ್ಕೌಟುಗಳು ಸೇರಿರುವರು]

**ಸ್ಕೌಟು ಮಾಸ್ಟರ್** — Boys! ಕಿಟ್ಟಿ ಮುಖಾ ಮೈ ಬಟ್ಟೆಗಳ್ನ ಸರಿಮಾಡಿ.

**ಕಿಟ್ಟಿ** — (half indignantly) ಯಾಕ್ಸಾರ್?..... .. ನನ್ಮೂತೀಗೇನ್ಕಮ್ಮಿ ಸಾರ್......ಕ್ಷಮ್ಸಿ ಸಾರ್......

**ಅಪ್ಪೂ** — ಕಮ್ಮಿ ಅಲ್ಲ ಕಾಣೋ, ಜಾಸ್ತಿ......ಹುಬ್ಬಿಂದ ಗಲ್ಲದವರ್ಗೂ ಒಂದೇ ಮಸಿ ಕಾಣೋ..........ಬರ್ರೋ ಲ್ರೋ!

ಎಳ್ಕೊಂಡ್ಹೋಗೋಣ......ಕೊಳಾಯಿನ್ಹತ್ರ........[The Scouts partly lead, partly drag and partly carry, exiting]

*Chief Scout* — (advancing L to owner of the house) ಏಳ್ಬೇಡಿ.....ಪರ್ವಾ ಇಲ್ಲ. ವ್ಯೆಗಸ್ವಸ್ಥ ; ಮನೆ ಬೆಂಕಿ ಎಲ್ಲಾ ಆರಿಸಾಯ್ತು......ರಾತ್ರೆ ನಿಮ್ಮ ಮನೇಲೆ ತಂಗ್ಬಹ್ದು. ಇನ್ನು ಮುಂದಿನ ಅನಾನುಕೂಲಾನಾ ನಾಳೆ Inspector ಇತ್ಯಾದಿ ನಿವಾರಿಸ್ತಾರೆ.....ಆದ್ರೆ ವಂದ್ಮಾತು ; ದುಡ್ಡ ನೀವೂ ಉಪ್ಯೋಗಿಸ್ದೆ, ಮನೇಗ್ ಬಿದ್ದ ಬೆಂಕೀ ಪಾಲೋ ಕಳ್ಳರಪಾಲೋ ಆಗೋಕೆ ಹೀಗೆ ಆಸ್ಪದ ಕೊಡೋದು ಶುದ್ಧ ಹುಚ್ಚು. ನಮ್ದೇಶದಲ್ಲಿ ದುಡ್ಡ, ಸಂಪಾದ್ಸಿದ್ದುಡ್ಡ, ಬ್ಯಾಂಕ್ನಲ್ಲಿ ಹಾಕಿದ್ರೆ ನಿಮ್ಮ ದುಡ್ಡು, ಬೆಂಕೀ, ಕಳ್ಳರ ಭಯವಿಲ್ದೆ, ಭದ್ರವಾಗಿದ್ದು, ಬಿತ್ತಿದ್ಬೀಜ, ಗಿಡವಾಗಿ ಫಲಿಸೋ ಹಾಗೆ, ಬಡ್ಡೀ ಸಮೇತ ವರ್ಧಿಸೋದೂ ಅಲ್ದೆ ದೇಶೋಪ್ಯೋಗಕ್ಕೆ ನಿಮ್ಮ ದುಡ್ಡ ಬ್ಯಾಂಕ್ನೋರು ಉಪ್ಯೋಗಿಸಬಹುದಾದ ಉಪ್ಕಾರಾನ ನೀವು ಮಾಡಿದ್ಹಾಗೂ ಆಗುತ್ತೆ. ಆದ್ದರಿಂದ ಈ ಮುಪ್ಪಿನಲ್ಲಿ ನಿಮಗ್ ಮುಂದಕ್ಕೆ ವದಗ್ಬೇಕಾದ್ದುಡ್ಡ ನೋಟ್ನೋಟಾಗಿ ಇಟ್ಕೊಂಡಿರೋದು ಅನುಚಿತ. ಈಗ್ಲೇ ಎಣ್ಸಿ Inspector ಕೈಲೊಪ್ಸಿ ನಾಳೆ ಬ್ಯಾಂಕ್ನಲ್ಹಾಕೋದು ನಿಮ್ದುಡ್ಗೂ, ನಿಮ್ಮನೇಗೂ, ನಿಮ್ಗೂ ಭದ್ರ..........ಸಮಾಜಕ್ಕೂ ಅನ್ಕೂಲ.

(significantly sweeping his eyes a round)

Officer ! take charge of the money and arrange at a Co-operative Bank agent, to convince this couple, typical of thousands like these, of the criminal folly of keeping

loose money in the house, to its own danger and to the loss of the State..........you understand!?

**Inspector** — (at attention, saluting) Yes, sir!

[The scouts lead in Kitti with washed face and dripping hair]

*Chief Scout* — (putting his hand out to the Inspector) Good night, officer, I congratulate your men on their calm execution of their duties! (officer salutes. The Prince acknowledges, wheels round to S. M. and putting his hand out) Good night! Scout master! I congratulate you. You and your boys have acquitted yourselves through this trial in a manner befitting the ideals of the Brotherhood that I am proud to belong to and be chief of! (shakes hands with S.M.) ......where is that boy..........."ಕಿಟ್ಟು". I think, his name is..........?

**ಸ್ಕೌಟು ಮಾಸ್ಟರ್** — Krishna Rao, sir!.......... Krishna Rao! forward..........!!

[Kitti is pressed forward by his brother-scouts]

*Chief Scout* — (Shaking hands with Kitti) I am glad to see that you are none the worse for your heroic hazarding of your life for a fellow scout and I hope your conduct to night will prove an example to the rest of us all in the Brother-hood of scouts, in which I sincerely hope, you will grow to live and serve in your youth prime and age, as brilliantly as you have started in your cub-hood! (turning to S. M.) ಈ ಮಗುವಿನ್ಮನೇಗೆ ನೀವ್ಹೋಗಿ ಅವರ ತಂದೇಗೆ explain ಮಾಡ್ಬಿಟ್ಟು.... ಇವನ ಮುಂದಿನ education ವಿಷ್ಯದಲ್ಲಿ ಈ boys ಹೇಳಿದ "circumstancessoo" ಅಂ ಬೋ obstacle ನ surmount ಮಾಡ್ಬೇಕಾದ details ನ ನಾಳೆ report ಮಾಡಿ! Goodnight, every body ....!!

[ಹೊರಡಲುಪಕ್ರಮಿಸುವರು.]

**ಸ್ಕೌಟು ಮಾಸ್ಟರ್**—(haranguing at attention) Scouts of the Bangalore City "N"th brigade!...............'SHUN!' Salute! (The patrol salutes). The Anthem!!

['ಕಾಯೌ ಶ್ರೀ ಗೌರೀ' is sung]

[The Chief Scout stands at salute]

**ಸ್ಕೌಟು ಮಾಸ್ಟರ್** — Scouts! Stand at ease .. stand easy!..... ........................(The scouts do accordingly). Three cheers to His Highness the Chief Scout and the Royal House!...........

Hip......Hip... Hip......Hurray !

( The scouts join in )

Hip ......Hip......Hip .... Hurray !

Hip ......Hip .....Hip......Hurray !

[ To the sound of the cheers, the Chief Scout exits followed at a respectable distance by the Scout master, the Inspector, the scouts, the Policemen and the crowd ; Kitti with the couple is left behind ]

**ಈಕೆ**—(ತೊಟ್ಟಿಲನ್ನಾಡಿಸುತ್ತಾ) ನೀವಿಷ್ಟ್ದಿನ ಹೇಳ್ತಾಲೇ
ಇದ್ರುಲ್ಲಾ...... “ ನಮಗ್ನಾವೇ..... ನಮಗ್ನಾವೇ......ನಮ್ಕಷ್ಟಕಾಲಕ್ಕೆ
ಯಾರೂ ವದಗೋದಿಲ್ಲಾ”ಂತ! .....ಇವತ್ನೋಡಿ,ಮನೇಗೆ ಬೆಂಕೀನೂ
ಬಿದ್ದು ನೀವೂ ಕದಲೋಕಾಗ್ದೆ ಬಿದ್ಕೊಂಡು, ಕೂಸೂ ನಾನೂ .....
“ ದೇವ್ರೇ ಕಾಪಾಡ್ಬೇಕೂ”ಂತ ಕಂಗೆಡ್ತಿದ್ದಾಗ, ಆ ಮಗು—ಆ
ಮಗು ನಮಗ್ಯಾರು ? ನಾವು ಅವನಿಗ್ಯಾರು .....ದೊಡ್ಮನುಷ್ಯರ
ಮಗ್ನಂತೆ—ಕುಂಟ್ತಿದ್ರೂನೂವೆ .....ಬೆಂಕೀಗ್ ಬೆದರ್ದೆ ನಮ್ಮನ್ನೆಲ್ಲಾ
ಹೊರಕ್ಕ್ತಂದು ನಂ ದುಡ್ಡಿನ್ಪೆಟ್ಗೆ ತರೋಕೇಂತ ವಳಕ್ಕ್ ನುಗ್ಗಿ
ದ್ನಲ್ಲಾ .....ಆಮೇಲೆ ಆಷ್ಟೊಂದು ಜನ ಮುತ್ಕೊಂಡ್ ಪೇಚಾಡ್ತಿ
ದ್ದ್ರಲ್ಲಾ......ಈ ಇನ್ನೊಬ್ಬ ಹುಡ್ಗ ಎಲ್ಲಿಂದ್ಲೋ ಬಂದು, ಆ ಮಗೂ
ನೆದರ್‌ನೋಡ್ತಾ ಕಾದಿರೋ ಹೆತ್ತ್ತಾಯಿ ಹಂಬಲಾನ ತೀರ್ಸೋಕೆ,
ಹೊಗೇಗೂ ಬೆಂಕೀಗೂ ಹೆದರ್ದೆ ತನ್ನ ತಡ್ದೋರ್ನ ತಳ್ಬಿಟ್ಟು ಒಳ
ಗ್ನುಗ್ಗಿ, ಆ ಹುಡ್ಗನ್ನೂ, ನಂ ದುಡ್ಡಿನ್ ಪೆಟ್ಗೇನೂ, ಹೊರಗ್ ತಂ
ದ್ಹಾಕ್ದ, ಈ ಹುಡುಗನ್ಗೆ ಆ ಹುಡುಗನೂ, ಆ ಮಗೂನ ಹೆತ್ತ

ದೊಡ್ಡ್ ಮನುಷ್ರ್ಯ, ಯಾರು?......ಇನ್ನಮ್ಮ ಮುಂದಿನ ಕ್ಷೇಮಕ್ಕ್ ಅಭ್ಯಾ ಕೊಟ್ಟ್, ನಮ್ಮುಂದಿನನುಕೂಲಕ್ಕೆ ಏರ್ಪಾಡ್ಮಾಡಿ ಹೋದ ಯುವ್ರಾಜ್ರಲ್ಲಿ !??......**ಏನೋ ನಂ ನಂ ಸೌಕರ್ಯಗಳಲ್ಲಿ, ನಮಗ್ನಾ ವೇಂತ ತಿಳ್ಕೊಂಡಿರ್ತೇವೆ ಹೊರ್ತು, ನಮ್ಕಷ್ಟಕಾಲಕ್ಕೆ ದೇವ್ರು ಗಾನ ದಯವಿಟ್ಟ್ರೆ ಎಲ್ಲಿಂದ್ಲಾದ್ರೂ ಬರ್ತಾರೆ,ಸಹಾಯಕ್ಕೇಂತ !** ......(to Kitti) ವ್ಯೆ ಜಾಸ್ತಿ ಸುಟ್ಟಿಧ್ಯೇ ಮಗು? ಹತ್ರಾ ಬಾ,...... ಹತ್ರಾ ಬಾಪ್ಪಾ!...........ಹೊತ್ತಾಯ್ತು; ಬೇಕಾದ್ರೆ ನಮ್ಮನೇಲೇ ಮಲಕ್ಕೋಪ್ಪಾ.

**ಕಿಟ್ಟಿ —** ಕ್ಷಮಿಸ್ಬೇಮ್ಮಾ, ನಿಮ್ಮ ಜಾನ್ ಬಚಾಯಿಸ್ದ್ ನಾನಲ್ಲ. ಮೊದ್ಲು ಹೋದ ಹುಡ್ಗನ್ನೆತ್ಕೊಂಡ್ ಬಂದದ್ದ್ ನಾನು......ಅವ್ನೇ ಎತ್ಕೊಂಡ್ಬಂದದ್ದು ನಿಂ ಆzಬಾಬ್ನ......ಅವ್ನು ಅದನ್ನ ತಬ್ಕೊಂಡಿ ದ್ದ್ಹಂತ್ಗೆ ಹೊರಗ್ಬಂತು ನಿಂದುಡ್ಡಿನ್ಪೆಟ್ಗೆ...........ನಾನಲ್ಲ ಅದನ್ ತಂದದ್ದು......ನಿಮ್ಮ್ಯಜಮಾನ್ರು ಹೇಳಿದ್ದ್ಸರಿ...........ಯಾರಿಗ್ಯಾರೂ ಇಲ್ಲ. ನಿಮಗ್ನಾನೂ ಇಲ್ಲ ನನಗ್ನೀವೂ ಇಲ್ಲ...........ಈ ಚರ್ಚೆ ಇಲ್ಲಿರ್ಲಿ!...........ಹಿಮ ಬೀಳ್ತಿಧೆ, ಎಳೀಕೂಸೂ, ಚಳೀ, ಕ್ಷಮಿಸಿ ಏಳಿ......(taking up the cradle with the baby in it) ಬನ್ನೀಮ್ಮಾ, ಇದನ್ನೆಲ್ಲ್ ಕುಕ್ಕೋದು?......ಇಲ್ಲ.....ಹಗ್ಗ ಕಟ್ಟಿ ಹಲಾಯ್ಸೋ ಬಾಬ್ತೋ?........... (looking into the cradle....in admiring face and voice) ಒಳ್ಳೇ ರುಸ್ತುಂ ಕಾಣಮ್ಮಾ ನಿಂ ಹುಡ್ಗ! ಅಲ್ಲಾ, ಯೋಗೀಂತಾರಲ್ಲಾ! ಆ ಬಾಬ್ತು!....ನಿಮ್ಮನೇಗ್ ಬೆಂಕೀ ಬಿದ್ದು, ಬೆಂಗ್ಳೂರ್ ಬೆಂಗ್ಳೂರೇ ಬಂದಿತ್ತು ಬಾಣ ಬಿರ್ಸು ನೋಡೋಕೆ......ಯುವ್ರಾಜ್ರಿಂದ್ ಹಿಡ್ದು, ಯಾರೂ ಬಿಡ್ದೆ......ಇಲ್ಲಾದ್ಗಲಾಟೇ ಏನು? ಕಿಲ್ಲಾಟ ಏನೂ? ಇವೆಲ್ಲಕ್ಕೂ ಭೋಡಾ ಆಗಿ, **ದುನ್ಯ ದುನ್ಯಾನೆ ಫನಾ ಆಗ್ತಿರೋ**

**ವಾಗ, ಹೆಬ್ಬೆಟ್ಟು ಕಚ್ಕೊಂಡು, ಹಾಯಾಗ್ತೇಲ್ತಿರೋ ಆಲ್ದಲೆ ಕಿಟ್ಟೀ ಹಾಗೆ, ಒಳ್ಳೆ ಸ್ವಯಂಭೂವಸ್ಸ್ನಾ......ನಿಮ್ಮುದ್ದ!......ನಮ್ಮಕ್ಕ** ನಿಗೊಬ್ಬ್ ಮಗಾ ಇಥಾನಮ್ಮಾ......ಇವ್ನಷ್ಟೇ ಅವ್ನುವೇ — ನಾಳೆ ಬೇಕಾರೆತ್ತಿಕೊಂಡ್ಬರ್ತೀನೆ......ಸಮ್ಜೋಡಿ......ಕುಷ್ಠೀಗ್ಬಿಡ್ತೀನೆ.......... ನೋಡೀ ಅವನ್ಜೂರತೂ!(exit through house-door followed by the lady and re-enters alone and helps the old man to rise) ಬನ್ನಿ ಸಾರ್, ಏಳಿ. ಬೆಂಕೀಗೆ ಬೆದರ್ಕೊಂಡು ಹೊರಗ್ಬಂದದ್ದಾಯ್ತು..........ಈಗ್ಹೋರಗೆ ಛಳಿ...... ಒಳಗ್ಬನ್ನಿ! ಪ್ರಪಂಚಾನೇ ಹೀಗೆ, ಅಲ್ವೇ? ನಿನ್ನೆ ಮಳೆ.......... ಇವತ್ತು ಬೆಂಕಿ.....ನಾಳೆ ಗಾಳಿ!.....

**ಮನೆಯಾತ —** ಅಪ್ಪಾ......ನಿನ್ನಡ್ತೇ, ನಿನ್ಭಾಷೆ, ನಿನ್ಮಾತು, ಒಂದಕ್ಕೊಂದು ಹೊಂದೋದೇ ಇಲ್ಲ. ಧೀರನ್ಹಾಗೆ ಬೆಂಕೀಗ್ ನುಗ್ತೀಯಾ! ಹೆಂಗಸಿನ್ಹಾಗೆ ಮಗೂನ ಲಾಲಿಸ್ತೀಯಾ; ತುರ್ಕ್, ಸಂಸ್ಕೃತ, ಕನ್ನಡ, ಇಂಗ್ಲೀಷು ಕಲಸ್ಮೇಲೋಗ್ರ ಮಾಡಿ ಮಾತಾಡ್ತೀಯಾ! ಎಷ್ಟು ಯೋಚ್ಸಿದ್ರೂನೂವೆ ಬಿಡಿಸ್ಲಾಗ್ದ ವಗ್ಟೆ ಹಾಗಿದ್ದೀಯಲ್ಲಪ್ಪಾ ನೀನು?

**ಕಿಟ್ಟಿ —** (tenderly leading him through the door) ನಿಮಗೇನೂ?..........ಎಂಥೆಂಥಾ ಶಂಕ್ರಾಚಾರ್ರುಗ್ಳಿಗೇ ನೇ ಬಿಡಿಸ್ಲಾಗ್ದ ವಗ್ಟೇ ನಾನೂ!......ಬನ್ನಿ ವಳಕ್ಕೆ [ Exit with the old man, with the cash box under his arm ]

[ Enter—L. Appu, Raghu and the rest of the patrol ]

**ಅಪ್ಪೂ** — ಆ ಗುಬ್ಬಚ್ಚೀ ಹೇಳಿದ್ದೊಂದೊಂದೂ ಚಾಲ್ತೀ ಗೆಬರ್ತಿರ್ಥೆ ಕಣೋ......ಜ್ಞಾಪಕ್ಕಿರ್ಥ್ಯೇ......ನನ್ನ್ನ ಪಡಾಯ್ಸಿ, ನನ್ನೋ ಬ್ನಿಂದ ಕಾರದವ್ಲಕ್ಕೀ ಛಿನಾಯಿಸ್ಕೊಂಡ್ನಲ್ಲಾ...........

**ರಾಘು** — ಅದೇನೋ ಛಿನಾಯ್ಸೋದು?

**ಅಪ್ಪೂ** — ಕಸುಕೊಳ್ಳೋದು ಕಣೋ!

**ರಾಘು** — Good wordsಓ......................ಇನ್ಮೇಲ್ಕಲೀ ಬೇಕ್ಕಾಣ್ರೋ, ಕಿಟ್ಟಿ languageಉ!.....ಹುಂ, ಅದೇನ್ ಹೇಳ್ತಿದ್ದದ್ನೀನು?

**ಅಪ್ಪೂ** — ಏನೇನೋ?......ಗುಬ್ಬಚ್ಚಿ ಹೇಳಿದ್ದು......ಜ್ಞಾಪಕ್ಕಿಲ್ವೇ? ಆ ದಿನ......ನಿನ್ನ "ಮುಗ್ಗೈರ್" ಅಂದ್ನಲ್ಲಾ ಅವತ್ತು.......... ಕೋಪಿಸ್ಕೋಬೇಡ ರಾಘೂ!..........ಗುಬ್ಬಚ್ಚಿ ಹೇಳಿದಾ ನೋಡು "ಕಿಟ್ಟೇನ್ ಸೇರಿಸ್ಕೊಂಡ್ರೆ wrestlingಉ, runningಉ, swimmingಉ, ಒಂದೊಂದ್ರಲ್ಲೂ cupಉ, champion-shieldಊ ನಂ ಪೆಟ್ರೋಲೇ ಲಪ್ಟಾಯಿಸ್ಬಹ್ದೂ"ಂತ. ಅದೊಂದೊಂದೂ ಜಾರೀಗ್ಬರ್ತಾ ಇಥೆ ಕಣೋ! mile-raceನಲ್ಲಿ ಜಿಂಕೆ, jumpingನಲ್ಡೀಗೆ; cupಉ ನಮ್ದು! swimmingನಲ್ಲಿ ಒಳ್ಳೇ ಬಾತೂ, ಆ cupಊ ನಮ್ದೇ! ಇನ್ನು wrestlingನಲ್ಲೋ, ಸಿಂಹ!!

**ಶಾಮಿ** — ಸಿಂಹ? ......ಲೋ! ಥೇಟ್ ಖಾಸ್‌ಬಂಗ್ಲೇನೋ ಕಿಟ್ಟಿ.

**ಅಪ್ಪೂ** — ಹೂಂ ....ಅವನ್ನ wrestlingನಲ್ಲಿ ಗಿರಾಯ್ಸೋಗಾಮ ಇನ್ನೂ ಹುಟ್ಟಿಲ್ಲ.....ನಮ್ಮ brigadeನಲ್ಲಿ; ಆ cupಊ ನಮ್ದೇ. ವಟ್ಟ್ನಲ್ಲಿ sports shieldಊನಮ್ದು ಖಾತ್ರಿ!

(suddenly raising his voice triumphantly) ಆಯ್ತೋ!! ಕೇಳ್ರೋ....... ಲ್ರೋ, ಕಿಟ್ಟೀ ಹೇಳೋ ಹಾಗೆ, ಕೇಕ್ಕಿಗಳ್ರಾ! ಯುವ್ರಾಜ್ರು, ಕೊನೇಗೆ ಹೋಗೋವಾಗ ಹೇಳಿದ್ದು ...... ಕೇಳಿದ್ರೇನೋ?.....ವಳ್ಳಿ leader ಓ ನೀನು!!

**ರಾಘು** — ಅದೇನೋ ಹೇಳ್ತಿದ್ರೋ ........ ಇಂಗ್ಲೀಷಿನಲ್ಲಿ! S.M.ಊ, ಎಲ್ರೂ ಮುಚ್ಕೊಂಡಿದ್ರೋ.

**ಅಪ್ರೂ** — ನಮ್ಮ ಪೆಟ್ರೋಲ್ಗೇ, ಶುಕ್ರದೆಶೆ ಕಣ್ರೋ, ಶುಕ್ರ ದೆಶೇ. Highnessಗ್ಳು ನಮ್ಮ್ faವರ್ರಾಯ್ನಿ ಕೆಲ್ಸಾನ್ನೋ ಡ್ಬಿಟ್ಟು...ನಮ್ದೊಂದ್ರೇನೂ ..ಮಗೂದು..........ಕಿಟ್ಟೀದು ಸಾಹ್ಸಾ ನೋಡ್ಬಿಟ್ಟು, award ಮಾಡಿಧಾರೆ ಕಣ್ರೋ! brigade, brigadeಏ ಬೆಚ್ಬೀಳತ್ತೋಡ್ರೋ ಬೆಳಕ್ ಹರೀಲಿ!

**ಶಾಮಿ** — (ಥಟ್ಟನೆ ಎಚ್ಚರಿಸುವ ಧ್ವನಿಯಿಂದ) S. M. ರೋ! SSSHHHH!!!! S.M. ರೋ!.

( Enter S.M. )

**ಸ್ಕೌಟು ಮಾಸ್ಟರ್** — I congratulate you Raghavendra Rao!(shakes hands with Raghu) ....Troopನಲ್ಲೆಲ್ಲಾ most coveted honour, ನಿನ್ನ Patrolಗೇ – ನನ್ನ ದಬ್ಕೊಂಡ್ಹೋಗೋಕೆ ಪ್ರಯತ್ನ ಪಟ್ಟದ್ದು foolishoo—ಅದಿಲ್ಲ್ದೆ – ನಿಮ್ಮೆಲ್ರ heroic behaviourನ ಗಮ್ನಿಸಿ "life saving shield"ನ ನಿನ್ನ patrolಗೇ award ಮಾಡಿದ್ದಾರೆ Chief Scoutಊ!

**ರಾಘು** — (ದೃಷ್ಟಿಯಿಂದ patrolನ ಬೀಸಿ, ಅಪ್ಪೂವನ್ನು ದುರುಗುಟ್ಟಿ ನೋಡಿ S M, ಕಡೆ ತಿರುಗಿ) ನನ್ನ patrol

ಏನ್ ಸಾರ್......ಗುಬ್ಬಚ್ಚಿ......ಅಲ್ಲ, ಮಗು ಇಲ್ದಿದ್ರೆ, ಮನೆಯವ್ರು ಘಟ್ಟ. ಇನ್ನು ಕಿಟ್ಟಿ ಇಲ್ದಿದ್ರೆ ಮಗೂ ಘಟ್ಟ......ಅವ್ರಿಗೆ ಸಾರ್...... shieldoo!

**ಅಪ್ಪೂ** — (anxiously) ಹೌದೂ! ಮಗೂಗೆ ಹ್ಯಾಗಿದೆ ಸಾರ್? ಪರ್ವಾ ಇಲ್ವೇ?

**ಸ್ಕೌಟು ಮಾಸ್ಟರ್** — ಅವರನ್ನೂ ಮರೀಲಿಲ್ಲ Chief Scoutಗ್ಳು. ಇಬ್ಬರಿಗೂ "Life saving badgesಉ"............ ರಂಗಣ್ಣೋರೆ–ಮಗೂಂತೀರೋ ನೀವು !? – danger ಏನೂ ಇಲ್ಲ. ಆದ್ರೆ ವಂದ್ ತಿಂಗ್ಳು ಕದ್ಲೋ ಹಾಗಿಲ್ಲ ಮನೆಯಿಂದ......ಕಾಲ್ ಸುಟ್ಟಿಧೆ......ಇವ್ನೆಲ್ಹೋದ, ಕಿಟ್ಟೀ?............I mean young Krishna Rao? ಮನೇಗ್ ಹೋಗ್ಬಿಟ್ನೇನೂ? ನಾನ್ಮೊದ್ಲು ಹೋಗಿ explain ಮಾಡ್ಬೇಕೂಂತಿದ್ದೆ, ಅವರ fatherಗೆ............ Chief Scout ಹೇಳಿದ್ಹಾಗೆ......ಹೊಟ್ಹೋಗ್ಬಿಟ್ನೇ?

[looks around]

**ಅಪ್ಪೂ** — ಎಲ್ಹೋದಾನು ಸಾರ್! ಕೋಟು ನನ್ನ ಹತ್ರಾನೇ ಇಧೆ. ಜೋಬ್ನಲ್ಲಿ ಒಂದ್ಕಟ್ಟಂಜಿನ್......ಅಲ್ಲ......

**ಸ್ಕೌಟು ಮಾಸ್ಟರ್** — ಜೋಬ್ನಲ್ಲೇನು? ಇಂಜಿನ್ನೇ?......

**ಅಪ್ಪೂ** — ನನಿಗೇನ್ಗೊತ್ತು ಸಾರ್! ಹ್ಯಾಗ್ಸಾರ್ ಮಾಡೋದು ಜಫ್ತೀನ, fellow scout ಕೋಟ್ನ? ಇಂಜಿನ್ನಲ್ಲ ಸಾರ್......ಜಿನ್‌ಜಿನ್ ಅಂತ jingle ಮಾಡ್ತಿಧೆ ಸಾರ್ ಜೋಬ್ನಲ್ಲಿ! ದುಡ್ಡೋ ಏನೋ!? ಬಿಟ್ಹೋಗೋ ಬಾಬ್ತಲ್ಲ ಸಾರ್ (aside to Shami) ಕಿಟ್ಟಿ ವರ್ಸೇ ಕಣೋ;......ಗಫೆ!

**ಸ್ಕೌಟು ಮಾಸ್ಟರ್** — ಮತ್ತೆಲ್ಲಿ ಅವ್ನು? ನೋಡಿ!............

[The scouts disperse to look around. The lilt of a lullaby is heard within the house]

**ರಾಘು** — (giving his ear to the window) ಅಪ್ಪೂ ! ಶಾಮಿ ! ಲೋ! ಇಲ್ಕೇಳ್ರೊ ಕಿಟ್ಟೀನೇ ಅಲ್ವೇನ್ರೋ?

(cautiously opens the window)

[ heard within : **ರಾಗ — ಕಮಾಚ್  ತಾಳ — ಏಕ**

ಮಥುರಾ ಪುರೀಗೆ ಬಂದು |
ಮಾಯಾ ಕಂಸನ ಕೊಂದು ||
ಜನಕೆ ಶಾಂತಿಯ ತಂದ |
ಜಗರಾಜ ನಿನಗಿಂದು ||
ಜೋ ಜೋ ಜೋ ಗೋಪಾಲ
ಕುವಲಯ ನೀಲಾ ||ಪ||

Kitti is seen singing and rocking a cradle to and fro to time ]

**ರಾಘು** — After all......**ಹೆಂಗ್ಸೇ ಕಾಣೋ, ನಮ್ಮ** hero!!

**ಅಪ್ಪೂ** — ಹೌದೋ, ಮಕ್ಳು ಮರೀಂದ್ರೆ ಹೆಂಗ್ಸೇ ಅವ್ಳು! ......**ಗಂಡಸರೆದುರ್ಗೆ ಕಿರುಬ್ನಿಂದ ಕೋಳೀವಗರ್ಗ**-ಕೋಪಸ್ಕೋ ಬೇಡ ರಾಘು—**ಗಂಡ್ಸು**!

[ Within —

**ಮನೆಯಾಕೆ** — ಎಷ್ಟು ಚನ್ನಾಗ್ಹಾಡ್ತೀಯಾ ಮಗೂ!? ಇದೆಲ್ಲಿ ಕಲ್ತೆ ಹೆಂಗಸ್ರಾಡು?

**ಕಿಟ್ಟಿ** — ಹಾಡ್ಕಲಿಯೋಕೆ ಎಲ್ಲಮ್ಮ ಬಿಡ್ತು ಗಂಡಸ್ರಿಗೆ? ಈ ಹಾಡ್ನ, ರಾತ್ ತಪ್ದೇ ರಾತು ನಮ್ಮಕ್ಕ ಅವಳ್ಮಕ್ಕಿಗೆ ಹಾಡ್ತಿದ್ರೆ,

ಅವನಿಗೆ ನಿದ್ರೆ ಇಲ್ಲ! ಅವ್ನಿಗ್ ನಿದ್ರೆ ಇಲ್ದಿದ್ರೇ, ನಮುಗ್ನಿದ್ರೆ ಇಲ್ಲ!...... ಗಡಾರೀಮ್ಮಾ ಅವ್ನ ಗಂಟ್ಲು...... ನನ್ನ್ಹೆಸ್ರೇ ಇಟ್ಟಿಧಾಳೆ ಅವ್ನಿಗೆ ನಮ್ಮಕ್ಕ ...... ವಟ್ಟ್ಯಲ್ಲಿ ಅವ್ನು ಬಾಯ್ಬಿಟ್ರೆ ಕೃಷ್ಣಗಡಾರಿ ...... ಮೇಘ್ನಾದ...... ಈ ಘಟ್ಟಿಂಗ್ನಿಗೂ-ಇವ್ನ್ಗೂ-ಕೆಂಪು ...... ಅದೇ ಮಟ್ಟೀ ಷೋಕಿ! ...... ಸುಸ್ತೂಮ್ಮ ಮಗು ...... ಇನ್ನೊರಡ್ತೇನೆ ...... ನಿಮ್ಹಾಳು ದುಡ್ಡಿನ್ಹೆಟ್ಗೇ ಜೋಪಾನ ...... ಹೆದರ್ಕೆ ಆದ್ರೆ ಹೇಳಿ, ಇಲ್ಲೇ ಮಲಕ್ಕೋತೇನೆ ...... ನಮ್ಮಪ್ಪ ಬೆದರ್ತಿರ್ತಾನೆ ಏನು ಬೇನೆ ಬಂತೋ ನನ್ಗೇಂತ ...... ಹಿಂದಿನ್ಬಾಕ್ಲೆಲ್ಲಾ ಹಾಕಿಧೇನೆ ...... ಒಳಗ್ಯಾರೂ ಬರೋ ಹಾಗಿಲ್ಲ! ಕಾಸಿದ್ಹಾಲು ಆ ಮೂಲೇಲಿಟ್ಟಿಧೇನೆ ...........ಕ್ಷಮ್ಸೀಮ್ಮಾ! ಉಕ್ಕಿಬಂದಾಗಿಳ್ಸಿದ ಗಲಾಟೇಲಿ ಸ್ವಲ್ಪ ಚೆಲ್ಹೋಯ್ತು !...........

**ಮನೆಯಾಕೆ** — ಭಯವೇನೂ ಇಲ್ಲ, ಮಗು! ಇಷ್ಟುದಿನ ಇಲ್ದಿದ್ದ ಭಯ ಇವತ್ತೇನೂ? ಹೊರ್ಡು ಮಗು ...... ಕತ್ಲೆ ...... ಹುಷಾರಾಗ್ಹೋಗ್ಬೇರು!]

[By this time the patrol and the S. M. who have over—heard all this, draw together to L]

**ಕಿಟ್ಟಿ** — [ enters followed by ಮನೆಯಾಕೆ ]

**ಮನೆಯಾಕೆ** — (standing on the door step) ಏನೋಪ್ಪ ಇವತ್ತಿನ್ ಕಷ್ಟಾನ್ನೂ ದೇವ್ರೇ ಕಳಿಸ್ದ ನಮ್ಮನ್ನ್ ಶೋಧ್ಸೋಕೆ ...... ಅದನ್ನ್ ನಿವಾರ್ಸೋಕೂ ನಿಮ್ಮೆಲ್ರನ್ನೂ ಕಳಿಸ್ದ ಅದೇ ದೇವ್ರು! ನಿಮ್ಮುಪ್ಕಾರ ಯಾವಾಗ್ಲೂ ಮರ್ಯೋದಿಲ್ಲ, ನಾನೂ, ಇವ್ರೂ! ಇನ್ ನಮ್ಮಿಂದ ಅಲ್ಪ ಸ್ವಲ್ಪ ಉಪ್ಕಾರ ಏನಾದ್ರೂ

ನಿನಿಗಾಗ್ಲೀ ಈ ನಿನ್ನ ಸ್ನೇಹಿತರಿಗಾಗ್ಲಿ ಆಗೋ ಪಕ್ಷಕ್ಕೆ, ಈ ದೊಡ್ಡ್ರುಣಾನ ತೀರಿಸ್ಕೊಳ್ಳೋಕೆ ನಮಗವಕಾಶಾನ ಕೊಡೋಕೆ ಮರೀಬೇಡ ಮಗೂ!

**ಕಿಟ್ಟಿ** — ಹಾಗಾದ್ರೆ ...... ನನ್ಗೊಂದು ಉಪ್ಕಾರ ಮಾಡ್ತೀರಾಮ್ಮ?

**ಮನೆಯಾಕೆ** — (anxiously) ಸತ್ಯವಾಗಿ ಮಾಡ್ತೀನಪ್ಪ, ...... ಕೈಲಾದ್ರೆ......ಅದೇನ್ ಮಗು, ಹೇಳು!?

**ಕಿಟ್ಟಿ** — ಹೆದರ್ಬೇಡೀಮ್ಮಾ! ಅದೇನು, ಕೊಂಚ ಕೆಲ್ಸ; ಇದೋ ಬಂದೆ! (Exits R and re-enters with ಕುಂಬಳ ಕಾಯಿ and cap, full of vegetables) ತರ್ಕಾರೀಮ್ಮ!! ಒಬ್ಬಾಕೇಗೆ ಉಪ್ಕಾರ ಮಾಡ್ಬಂದದ್ದಿದು! ನೀವು ಎರಡನೇ girl guideಊಮ್ಮಾ!.....ಕುಂಬ್ಳಕಾಯ್ಲಿ ಹಲ್ವಾ ಮಾಡೋದು ಗೊತ್ತೆ, ನಿಮ್ಗೆ......?

**ಮನೆಯಾಕೆ**—(ಹುಸಿನಗೆಯೊಡನೆ) ಹೂಂ .....

**ಕಿಟ್ಟಿ** — ಹಾಗಾರೆ ರುಣಾಂದ್ರೆಲ್ಲಾ, ತೀರ್ಹೋಯ್ತಮ್ಮಾ, ವಂದೇ ಏಟ್ಗೆ! ಇನ್ನು, ಮಜ್ಜಿಗೆ ಪಳಿದ್ಯಾಂತಾರಲ್ಲ, ಅದು?..... ಜಾಸ್ತಿ ಸಾಸ್ವೆ ಇರ್ಕೂಡ್ದು!......ಸಾಸ್ವೇಮ್ಮಾ!, ಬಾಯಿಗ್ರುಚಿ ಹೊಟ್ಟೇಗ್ಬಿಚ್ಚು—ಅಂದ್ರೇ—ಚೇಳು! (ತರಕಾರಿಗಳನ್ನು ವಿಂಗಡಿಸುತ್ತಾ) ಹುರಳೀ ಕಾಯನ್ನಕ್ಕೆ, ಅಕ್ಕಿ ಇದೆ ತಾನೆ ಮನೇಲಿ?...... ಇದು ತಾಜಾಮ್ಮಾ......ಮೊಸ್ರು ಬಜ್ಜೀಗೆ......ದೊಣ್ಣೆ ಮೆಣಸಿನ್ಕಾಯಿ! .....ಇಲ್ಲ್ಯಂತ್ರ ವಂದ್ ಹಳ್ಳೀಲಿ ಸೌದೆ ವಡ್ಯೋ duty ನನ್ಗೆ, ಭಾನ್ವಾಬ್ವಾರ......ನನ್ನ ಕೂಲಿ, ತರ್ಕಾರಿ, ಗಡ್ಗೆ ತುಂಬಾ ಕೆನೆ ಮೊಸ್ರು, ಅಲ್ದೆ ಬೇಕಾದಾಗ ಹಾಲು ತುಪ್ಪ; ಗೌಡ ನನ್ ದೋಸ್ತು—ಅಲ್ಲ—ಸ್ನೇಹಿತ!......ನಾಳೆ ಡ್ರಿಲ್ ತುಂಡು......ನಾಳೆ

ಹತ್ಗಂಟೀಗೇನೆ ಹಾಜರಾಗ್ತೀನಮ್ಮಾ......ಪಳಿದ್ಯಾ ಬಜ್ಜೀಗೆ ಮೊಸ್ರು, ಪಟಂಗ್ನಿಗೆ ಹಾಲು ಎಟ್ಸಿಟ್ರಾನ ಎತ್ಕೊಂಡು;......ಆದ್ರೆ ಹುಷಾರೂವಮ್ಮಾ! ಹೆಚ್ಕೊೀವಾಗ ಹಲ್ಯಾಗರ್ಧ, ಹುಳೀಗರ್ಧ! (placing all the vegetables inside the house and coming out) ಬಾಕ್ಲ್ ಹಾಕೊಳ್ಳೀಮ್ಮಾ, ಬರ್ತೀನೆ.

**ಮನೆಯಾಕೆ —** ಹೋಗ್ಬಾ, ಮಗೂ!

[The door is bolted from within]

**ಸ್ಕೌಟು ಮಾಸ್ಟರ್ —** ಕೃಷ್ಣಾಪ್ರಾವ್! ಇನ್ನೂ ಇಲ್ಲೀ ಇಧೀಯಾ!? Late ಆಗ್ಲಿಲ್ವೇ, ಮನೇಗೆ?

**ಕಿಟ್ಟಿ —** (stragglingly) ಕ್ಷಮ್ಸೀ ಸಾರ್!......ಬೆಂಕಿ ಬಿದ್ಮನೆ......ಎಲ್ಲಿ? ಏನು? ಯಾವಾಗ? ಹ್ಯಾಗೆ? ಏನೂ? ಎತ್ತ? ಹೀಗೋ? ಹಾಗೋ? ಹ್ಯಾಗೋ? ಇವುಗಳ್ನೆಲ್ಲಾ ತನ್ಖೆ ಮಾಡ್ದೇ ಕೈ ಹಾಕಿದ್ಕೆಲ್ಸಾನ ಕಾಲು-ಹಾಗ-ಮುಪ್ಪಾಗವಾಗಿ ಬಿಟ್ಟುಬಿಟ್ಟು ಬರೋದು ತೀನ್‌ತೇರಾಂತ, ತಂಗ್ಬೇಕಾಯ್ತು ಸಾರ್, ಸ್ವಲ್ಪ!.....Be prepared ಅಂತನ್ನೋ ಹಾಗೇ......(ಕೈಗಳನ್ನು ಕಿವಿಚುತ್ತಾ)...... ನಮ್ಮನೇಗ್ಹೋದ್ಲು ಹೋಗ್ಬಿಟ್ಟು—ನಮ್ಮಪ್ಪ ಮುಂಗೋಪಿ ಸಾರ್—ಹೊತ್ತ್ ಬಿಟ್ಕೊಂಡ್ರೆ ಬೆಂಕಿ ಸಾರ್—ನಾನ್ಯಾಕೆ ಇಷ್ಟು late ಊಂಬೋದ್ನ......ನೀವೇ ಹೇಳ್ಬಿಟ್ರೀ ...... (ಬಲಗೈಯನ್ನು ಚಾಚಿ) ಅಕೋ! ಅಶ್ವತ್ಥಕಟ್ಟೀ ಹತ್ರ ಮ್ಯುನಿಸಿಪಲ್ ಲಾಂದ್ರದ ಎದುರ್ಗೆ...... ಮನೆ!......ಸುಣ್ಣಹೊಡ್ದು ಬಲ್ದಿನವಾದ್ಬಣ್ಣ!......ಮೆಟ್ಲು ಹತ್ತೋವಾಗ ಹುಷಾರು ಸಾರ್!......ಯರಡ್ನೇ ಮೆಟ್ಲನ್ಮೇಲೆ ಕಾಲಿಡ್ಬೇಡಿ ಸಾರ್......ಅದಿಲ್ಲ ಅಲ್ಲಿ-absent ಉ!!

**ಸ್ಕಾಟು ಮಾಸ್ಟರ್** — Quite so! ನಾನ್ಹೇಳ್ಹೋಗ್ತೇನೆ! ನೀನ್..... ನಿಧಾನ್ವಾಗಿ ಬಾ......By the way, ನಾಳೆ drill ಗೆ ಬರ್ಬೇಕಾದ್ದಿಲ್ಲ......take a rest!

**ಕಿಟ್ಟಿ** — (ಬೆದರಿ) **Arrestoo?!** ಖುದ್ದಾಗವ್ರೇ ಹಾಕ್ದ್ರುಸಾರ್! ಹಾತ್ಗೆ! (ವಾಚು ಕೈಯನ್ನು ಚಾಚುತ್ತಾ) ಹೈನೆಸ್ಸುಗ್ಳು! ...... ಇನ್ನ್ಯಾಗೂ arrest ಏ ಸಾರ್?!

**ಸ್ಕಾಟು ಮಾಸ್ಟರ್** — Arrest ಅಲ್ಲಾ ಕಣೋ fool!, ಅಲ್ಲಾ, silly! (ಮುಂದಕ್ಕೆ ಬಂದು ಕಿಟ್ಟಿಯ ತಲೆಯನ್ನು ಸವರುತ್ತಾ)......ಅಲ್ಲಾ poor foolish child!......**rest ಉ ನಾನ್ಹೇಳಿದ್ದು, rest ಉ** (to other scouts) ನೀವುಗ್ಳು, ಕೃಷ್ಣ್ರಾವ್‌ನ ಮನೇಗ್ಸೇರಿಸ್ಬಿಟ್ಟು, ನಿಮ್ಮಿಮ್ಮ ಮನೇಗ್ಸೇರ್ಕೊಳ್ಳಿ!..........You will report to me, Raghu!, to-morrow morning. Good night all!

[Exit R]

[The moment he is out of sight, Raghu, Appu, Shami and Ramu, rush up to Kitti and **"chair"** him]

**ಎಲ್ಲರೂ—ಕಿಟ್ಟೀ-ಲೇ!!**

**ಕಿಟ್ಟಿ** — (Interrupting, in hushed voice) **ಹುಷಾರ್ರೋ ಲ್ರೋ! ಹುಚ್ಲ್ಲೂಸ್!** ಮಗು ಮಲಕ್ಕೊಂಡಿಧೆ ವಳ್ಗೆ:...... ಮುದುಕ್ರು ಪಾಪ ದಂಪತಿಗ್ಳು ...... ಮೊಮ್ಮಗು! ಮಗ, ಸೊಸೆ ...... **ಇನ್‌ಫ್ಲೂಯೆಂಜಾಲಿ.!** ಆದಿಲ್ಲ್ರೇ! ಮಗು ...... **ದೊಡ್ಕಿಟ್ಟಿ** ...... **ದೊಡ್ಡಪೋಲೀ ಕಿಟ್ಟಿ** ...... ತದ್ರೂಪ್ ತಸ್ಬೀರು ಸ್ವಲ್ಪಕೆಂಪು ಅಷ್ಟೆ! ......

ಅಪ್ಪೂ — ದೊಡ್ಕಿಟ್ಟೀ ? ? ! .... ದೊಡ್ಪೋಲೀಕಿಟ್ಟೀ ? ! ನಿನ್ಗಿಂತ ದೊಡ್ಪೋಲಿ ! ? ಎಲ್ಲಿ ? ಯಾರು ?

**ಕಿಟ್ಟಿ — ಎಲ್ಲೀ ? ಯಾರೇ ? ಕೇಳ್ರೋ ಲ್ರೋ !! ಕಿಟ್ಟಿ ನಾನೇ ! ? ಪೋಲೀ ನಾನೇ ! ? ದೋಸ್ತ್ರೂ ದುಷ್ಮನ್ರೂ ಫರಕ್ಕಿಲ್ದೆ ಫನಾ ಮಾಡ್ಬಿಟ್ಟು ಕುರುಕ್ಷೇತ್ರದ ಜಂಗ್ನಲ್ಲಿ, ಇನ್ನು ತನ್ನಹರ್ನಲ್ಲಿ ಅಮ್ಮ ಅಪ್ಪ ಭಾಯಿ ಬೇಹರ್ ಬಚ್ಚ ಬಾಬತ್ಗಳೇ ಬಾಕೀ ಇಡ್ದೆ ಗುಮ್ಮಾಡ್ಬಿಟ್ಟು, ಕೊಳಲ್ಬಾರಸ್ತಾ ಕುಣೀತಿದ್ದ್ನಲ್ಲಾ ಅವ್ನುಬೇಕಾದ್ರೆ ಪೋಲೀ ! ದೊಡ್ಪೋಲೀ !! ಕಿಟ್ಟಿ !... ದೊಡ್ಕಿಟ್ಟೀ!! ಮಹಾಭಾರತದೋನು ! ಅವನ್ಮೇಲಿನ ಆಷಕ್ಕಿನ್ ಷೋಕೀ ಮೇಲೇ ನಮ್ಮಜ್ಜಿ ಅವನ್ಹೆಸರ್ನ ನನಗಿಟ್ಟು ಅವನ್ಕಥೇನ ನನ್ನ ಬಚ್ಚತನದಲ್ಲಿ ಅವನ್ನ ಹೊಗಳ್ತಿದ್ಲಲ್ಲಾ, ಆ ಕಿಟ್ಟಿ ಬೇಕಾದ್ರೆ ಪೋಲಿ !! ನಾನಂತೆ !!** .......... ... ಮನೇಲಿ ನಡಗ್ತಾ ಕಾದಿರೋ ಅಪ್ಪನ್ನೂ ಅಕ್ಕನ್ನೂ ಮರ್ತು ಬೀದೀಲ್ಹೋಗ್ತಾ, ಬೆಂಕಿ ಬಿದ್ಮನೆಗಳಲ್ಲಿ ಬುದ್ಧಿ ಇಲ್ದೇ ತಾನ್ತಾನಾಗಿ ಬಿದ್ದ ಬಚ್ಚಾಗಳ್ನ ಬಚಾಯ್ಸೋದೂ ;, ಆಜಾದಾದ್ಮಾನು ನನ್ಮೇಲೆ ಆಷಕ್ಮಾಷಕ್ ಇಲ್ದ ಶುಕ್ರಾಚಾರೀಗಾಗಿ ಲಡತ್ಮಾಡ್ತಾ ಆವನ್ ಸುಲೋಚ್ನ ಬಚಾಯ್ಸೋದೂ ;...............ನಮ್ಮನೇ ಗೋಳಲ್ದೆ ; ನಮ್ಮಾಂಗೇ ಇರೋವ್ರ ಗೋಳ್ನಿಲ್ಲಾ ನನ್ನೆಂಗಲಿಗೆ ನಾನೇ ಹೇರಿಸ್ಕೊಂಡು ಕಣ್ಕಣ್ಬಿಡ್ತಾ......ನನ್ನಾಲ್ಗೇಲಿರೋ ಶನಿಸಿಹಿನರದ ಶೀಟ್ಟಿ ಶೀರಿಸ್ಕೊಳ್ಳೋಕೆ ನಿಮ್ಮಾತುಗಳ್ಗೆ ಫಿಸ್ರಿಬಿದ್ದು, ನೀವ್ ಬೊಗುಳಿದ ಬೊಂಬಾಯ್ ಬಾದಾಮ್ ಹಲ್ವ–ಡೆಲ್ಲಿ ದೂಧ್ಪೇಡ–ಇವುಗಳ್ನ ಎದುರ್ನೋಡ್ತಾ ನಿಮ್ಹಾಳು ಪಟಾಲಂಗೆ ದಾಖ್ಲಾಗಿ ಕಣ್ಕಣ್ಬಿಡ್ತಿರೋ ಈ ಕಪೋತ ! ಕೃಷ್ಣನಂತೆ ! ಪೋಲೀಂತೆ !.......... **ದೊಡ್ಡಿಕಿಟ್ಟಿ !..........ದೊಡ್ಪೋಲೀ ಕಿಟ್ಟಿ ! ಅವ್ನು !!** ಮಹಾ

ಭಾರತ್ದೋ್ನು! ವಳ್ಗಿರೋ್ನು ಅವನ್ತ್ದ್ರೂಪು.............ಸುಸ್ತಾಗಿ ನಿದ್ದೆ ಮಾಡ್ತಿಧಾನೆ! ಅವ್ನ ಎದ್ದ್ರೆ ಎಲ್ಲ್ರಿಗೂ ತಕ್ರಾರು! **therefore** (ಮೋಟಾರ್ ನಡೆಸುವವನು brake ನ್ನು ಹಾಕುವಂತೆ, ತನ್ನ ಕೈಯನ್ನು ಎತ್ತಿ ಆಡಿಸುತ್ತಾ) **brake ಉ**, ನಿಂಗಲಾಟೇಗೆ !!.

**ಅಪ್ಪೂ** — ಹಾಗಾರ್ದ್ಹೇಗ್ಬರ್ತ್ರೋ್ಲ್ರೋ!!

[ Led by Appu, the patrol carries Kitti to the edge of the proscenium ]

**ಕಿಟ್ಟಿ** — ಏನ್ರೋ್ ಇದು ತಾರೀಫು? ....ಕುಸ್ತೀಲ್ಮುಕ್ಕೊಂಡ ಕಾಲ್ನ ಬೆಂಕೀಲೂ ಸುಟ್ಕೊಂಡು ಮನ್ನೇಲ್ಮಲ್ಗಿರೋ್ನು, ಮಗು! ದೊಡ್ಮನುಷ್ಯರ್ಮಗ! carನಲ್ದೋ್ದೋ್ನು....ನಾನಲ್ಲ .... ಪೋಲೀಕಿಟ್ಟಿ ಅಲ್ಲ .... ಬಿಡ್ರೋ್ !!.

[ struggles to find his feet ]

**ರಾಘು** — ಅಲ್ಲ, ಕಿಟ್ಟೀ!.... ನಿನಗ್ಗೊತ್ತಿಲ್ಲ, sports shield ಊ, life saving shieldoo ...... ನನ್ patrol ಗೇನೇ ......

**ಕಿಟ್ಟಿ** — ನಿನ್ patrol ಓ ??. ನಿಮ್ಮಪ್ಪ ಬರ್ಕೊಕ್ಟಿದ್ದ ಅಲ್ವೇ ನಿನ್ಗೆ ? ....

**ರಾಘು** — ಕೋಪಿಸ್ಕೋಬೇಡ, ಕಿಟ್ಟೀ, ನಂದೇನ್ ನಿಂದೇನು .... **ನಮ್ಮ್** patrolಗೆ!

**ಕಿಟ್ಟಿ** — ಹಾಗಾರ್ ಕಣ್ಬಿಡ್ತಿದ್ದೀಯಾ? ಅದು better ಉ! (holding Raghu's shirt by the collar, softly)

ಪರ್ವಾ ಇಲ್ಲ, ರಾಘು! ನಿನ್ನ ಜಂಭ ಕರಗ್ತಿಧೆ! ಇನ್ನು ನಿನ್ಮೇಳೇ ತನದ ಕೊನೇ ತೊಟ್ಟು ಕುಗ್ಗು ತ್ಲೂನೂವೆ, ಹುಂಜ ಆಗ್ತೀಯಾ!

**ರಾಘು**.— ಒಪ್ಪ್ದೇ, ಕಿಟ್ಟೇ!

**ಅಪ್ಪೂ** — ನಮ್ಮ ರಾಘು ನಿನಗ್ಗೊತ್ತಿಲ್ಲ, ಕಿಟ್ಟೇ! ಅವ್ನ ಜಂಭದ ಬಾಬ್ತೇನೂ ಇಲ್ಲ ಈಗ! Grimm's fairy tales ನಲ್ಲಿ ಬಂದ್ಹಾಗೆ — once upon a time ಉ ........................ ......in days of yore ಉ......ಅಂದ್ರೆ ಒಂದಾನೊಂದು ಕಾಲದಲ್ಲಿ!

**ಕಿಟ್ಟಿ** — ಯಾರ್ಧತ್ತಲೋ ನಿನ್ನ yore ನ ಜೋರು? ನಿನ್ನ Englishಓ ನೀನೋ......ಅರ್ಥ ಹೇಳ್ಕೊಡ್ತಾನೆ....ನನ್ಗೆ.... Englishತಿಳೀದ ಗುಗ್ಗೂಂತ ತಿಳ್ಕೊಂಡ್ಯೇನೋ......ಅನ್ಮೇ formಗೆ ಮಣ್ಹಾಕ್ದ ಭೂಪ್ತೀಗೇ?

(struggles to get down in vain)

**ದಳದವ್ರು** — ಕೋಪಿಸ್ಕೋಬೇಡ ಕಿಟ್ಟೇ.

**ಕಿಟ್ಟಿ** — ಇದ್ಯಾಕ್ರೋ ಎತ್ಕೊಂಡಿಧೀರಾ ನನ್ನ........... ಅಮರದ್ಹಾಗೆ "ಪೌಲಸ್ತ್ಯೋ ನರವಾಹನಃ!" ಇತ್ಯಮರಃ!! ನಿಮ್ಮೇ ಲ್ಸವಾರಿ ಮಾಡೋಕೆ? (ಕೈಬೀಸಿ ಹೇಳುತ್ತಿರುವಾಗ ಕೈಯಲ್ಲಿರುವ ಗಡಿಯಾರದ ಕನಕದ ಹೊಳಪು ಕಣ್ಣಿಗೆ ತಾಕಲು) ಅಯ್ಯೋ ಹೌದೇ !! ಕುಬೇರ್ನೇ ನಾನು....ತಿಳೀತ್ರೋ ಲ್ರೋ............ನಿಂ ಕಾರೀfoo (ಎತ್ತಿಕೊಂಡಿದ್ದವರನ್ನೂ ವದ್ದು ಕೊಂಡು ನೆಲಕ್ಕಿಳಿದು) ವರ್ದಾಚಾರಿ ಕಂಪ್ನಿ ಕಂದದಲ್ಲಿ ಹಾಡಿದ್ಹಾಗೆ,........ಈಗರ್ಥ ವಾಯ್ತ್ರೋ ನಿಮ್ತಾರೀfoo!; ನೀವ್ಕುತ್ಕೊಳ್ಳೋದು ನನ್ನ!...... S.M.ಗೆ ಈವತ್ಮಧ್ಯಾಹ್ನ "fool" ಉ; "hopeless" ನಾನು, ಆದೇ ನಾನು......ಈಗ್ಹೋಗೋವಾಗ ಸಿರ್‌ನ ಸವಾರ್ "You

poor child'' ಉ,! ನಿಮಗೋ ವಾಕೀಫಾ ಆದ್ವಖತ್ತು 'ಪೋಲಿ', ಈಗ "ಕಿಟ್ಟಿ, hero"; ಬಿಶಾಯಿಸ್ಕೊಳ್ಳೋಣ ಭುಜದ್ಮೇಲೆ ಥಕೋ! ಥಕೋ!!....ಇದ್ಯಾಕೆ ಗೊತ್ತೇನ್ರೋ (ಕೈಯಿನ gold watchನ್ನೂ ಮುಂಗೈಯನ್ನೂ ಅಲುಗಿಸುತ್ತಾ) ಇದು ಸುವರ್ಣ, gold ಉ, ಸಿರಿ; ವರ್ದಾಚಾರಿ ಕಂಪ್ನಿ ಕಂದದ್ದಾಗೆ ಸಿರಿ! (ಹಾಡುವನು.)

ರಾಗ—ಕಾಂಭೋದಿ

" ಸಿರಿ ತಾಂ ಬರಲು ಷಕ್ಸಗೇ

ದುನಿಯಾನೇ ದೋಸ್ತುಗಳೂ ||''

Gold watch ಬರಲು brigadeಎಲ್ಲ ಬಂಧುಗಳೂ ||

ಈಗ ಬಂದ್ಸೇರಿದ್ರಾ ?......(ದುಃಖವನ್ನು ನಟಿಸಿ, ಇಲ್ಲದ ಕಣ್ಣೀರನ್ನು ತೋರಿಸುತ್ತಾ) ಇನ್ನಿದ್ದೊರಟೋಯ್ತೇ......? !

(ಪುನಃ ಹಾಡುವನು)

ರಾಗ—ನೀಲಾಂಬರಿ

" ಸಿರಿ ತಾಂ ತೊಲಗಲು ಭಗಾಯಿಸುವರೂ

Gold watch ತೊಲಗಲೂ......

S.M.ಉಗಳು, S. ಉಗ್ಗಳು, Cub ಉಗಳು, ದೌಡಾಯಿಸುವರೂ......ಶಿವಶಿವಾ, ಹರಿಹರೀ, ಹರಹರಾ, ಅಮಮಮಾ, ಸತ್ಯಂ, ದಿಟಂ, ನಿಜಂ ಧರೆಯೊಳ್, ಇಳೆಯೊಳ್, ಮೇಣ್......ಅಕ್ಕುಂ" || (ಎಂದು ಗೋಳಾಡಿ ಥಟ್ಟನೆ ತಾತ್ಸಾರದ ನಗೆಯನ್ನು ನಟಿಸುತ್ತಾ) ಗೊತ್ತೋ; ಲ್ರೋ! ನಿಮ್ ತಾರೀfooಗ್ಳು! ಹೆದರಸ್ತಾರೆ......

ಹೆದರಸ್ತಾನೆ.....yore ಊ ಗೀರೂ ಅಂತ ಇಂಗ್ಲೀಷ್ನಲ್ಲಿ.....ನಾನೇನು ಸ್ಕೂಲಿಗ್ಹೋಗ್ಲಿಲ್ಲಾ ........... ಸ್ಕೂಲಿಗ್ ಮಣ್ಣ್ ಹಾಕಲಿಲ್ಲಾಂತ ತಿಳ್ಕೊಂಡಿಧೀರಾ ?

**ಅಪ್ಪೂ** — sixth formನಲ್ಲಿ ಇದ್ದದ್ದು...........ಅಲ್ಲ..... ನಮ್ಮಣ್ಣೆಲ್ಲಾ ಒದ್ದದ್ದು.....ಗೊತ್ತು.....ಸ್ಕೂಲ್ ಬಿಟ್ಟದ್ದೂ.....cir cum stances ಊ.....ಅಂತ.....

**ಕಿಟ್ಟಿ** — ಹಯ್ಯೋ, ಮಂಕೂ ! ನನ್ನ ಸ್ಕೂಲಿಂದ್ಹೋಡ್ಸಿದ್ದು cir ಊ ಅಲ್ಲ, cum ಊ ಅಲ್ಲ, stances ಊ ಅಲ್ಲ ; ಉರೀ ಕಾಣೋ, ಎದೆ ಉರಿ ! ನನ್ನ ಸ್ಕೂಲು ಓಡಿಸ್ತೋ..... ಇಲ್ಲಾ.....ನಾನ್ ಬಿಟ್ಟು ಓಡಿದ್ನೋ.....ಬರತಫ್ರೋ ಇಲ್ಲ ರಾಜೀ ನಾಮೇನೋ ... ನೀನೇ ಹೇಳೋ cir ಊ cum ಊ stances ಓ.....! ಕೇಳ್ಕೊಲೋ!.....ಕಬ್ಬಗಳ್ರಾ! in days of yore ಊ ಅಂದೇ....yore ಏನೂ ?! .... ಯಾರೇನೂ ?!.....ಯಾರ್ less a man.....ಈಗ್ಲೂ ಹೆದ್ರಿಕೆ ಬರತ್ತೆ.....than Inspectoroo ! ಆತ ಹೈ ಸ್ಕೂ ಲಿ ಗೆ ಅ ಜ್ಞಾ ಯಿ ಷಿ ೀ ಗೆ ಬಂದಾಗ set ಮಾಡ್ದ Composition questionನ್ನಲ್ಲಿ answer ಕೊಡೋ ವಾಗ ನಾನು ತೋರಿಸಿದ ನನ್ನ ಕೊಬ್ಬೇ.....ಹಚಮಾಡಿದ್ದು..... ನನ್ನ.....ಹೈಸ್ಕೂಲಿಂದ !! ನನ್ನ ಇಂಗ್ಲೀಷೂ...........ಯಾವಾಗ್ಲೂ strong ಊ ! ಆ ಇನ್ಸ್ಪೆಕ್ಟರು—ಆ ದೊಡ್ಡ ಮನುಷ್ಯ ಪ್ರಾಣೀ ಬಂದ್‌ದಿನ.....ನಮ್ಮಣ್ಣನ್ ಜ್ಞಾಪ್ಕ ಬಂತೂ..... , therefore ನನ್ನಿಂಗ್ಲೀಷು ಆವತ್ತು ಚಂಡಪ್ರಚಂಡ strongoo — strongoo ಅಂದ್ರೇನು ? .. ..ಒಂದು ನಮೂೂನೆ strongoo!! ಸಾಲದ್ದಕ್ಕೆ...........ಹಕ್ಕೀಹಾಗೆ ಆzಾದಾಗ್ಬಾರಾಡ್ತಿದ್ನನ್ನ, ಸ್ಕೂಲು ಅಂಬೋ ಬೋನ್ನಲ್ಲಿ ನಮ್ಮಪ್ಪ ದಬ್ಬುತ್ಲೂನೂವೆ, ನನ್ಗಿರೋ

ರೆಕ್ಕೆಗಳ್ನ ಮ ತು ೯, ಬೊಕ್ಕೇಮಾಲೀಕ್ರು, teachersಊ, ಉತ್ತ್ರಾಯಿಸ್ಕೊಂಡು ನೋಡು......ಒಬ್ಬನ್ಮೇಲೊಬ್ರು ...... ನನ್ಹೊಟ್ಟೇಗೆ ಕಿಚ್ಚಿಡೋಕೆ !

ಎತ್ಕೋತಾ ಅರ್ಥ್ಮೆಟಿಕ್ನೋನು : ನನ್ಕೋಟೋ, open collarನ pinಹಾಕಿ close collarಊ ! ಹಕ್ಲು೯ ! ..... ಒಳಗ್ಷರ್ಟಿಲ್ಲ......ಟೋಪಿ, ಚರಿತ್ರೆ ಹಾಸನದಲ್ಲಿ ಹೆಣದದ್ದು, ಎರಡೆಕ್ರೆ ಭರತ್ಮಾತೆ ಭರ್ತಿಯಾಗಿರೋ ಪಂಚೆ.... ಬಡವರ ಬಚ್ಚ ನಾನು ..... ಬಿಸ್ಸಂ ಬಿಸ್ಲು ..... ಬಿರುದು ವಡೆದ ಪಾದ......ಬರೀ ಹೊಟ್ಟೆ......ಬಂದಿ ಧೇನೆ ಕ್ಲಾಸ್ಗೆ !..........ಹಾಕ್ತಾನೆ ಕೊಶ್ಚನ್ನು . .....ಕಂಬ್ಳೀ ಕೋಟ್ ಹಾಕ್ಕೊಂಡು ..... ಬೊಜ್ಜೆ......ಬಲ್ತು......ಎಲೆ ಅಡ್ಕೆ ಮೆಲ್ತಾ......ನನ್ನ ಮ್ಯಾಥ್ಮ್ಯಾಟಿಕ್ಸ್ ಟೀಚರ್ಊ Iyengarಇ, ಮೇಲ್ಕೋಟೆ, ಗಿಳಿಮೂಗ್ ಗಳ್ಡಾಚಾರಿ..........'practice'ನಲ್ಲಿ ಕೊಶ್ಚನ್ನು........... ಕೇಳ್ರೋ.....ಲ್ರೋ ! ಹೊಟ್ಟೆ ಹಸೀತಾ ಇರೋ ನನ್ಗೆ......ಕೊಶ್ಚನ್ ಹಾಕೋವ್ನು......ಹೊಟ್ಟೆ ತುಂಬ ತಿಂದು ಬಂದ teacherಊ.... ಕೊಶ್ಚನ್ answer ಮಾಡೋನು ಹೊಟ್ಟೆ ಬೇಯ್ತಿರೋ ಬಿಚಾರಿ ......ಕೊಶ್ಚನ್ನೋ, ಬೇಯೋ ವಲೇಗೆ ಮತ್ತಿಷ್ಟು ಸೀಮೆಯೆಣ್ಣೆ ! sumಊ practice sumಊ !......"Find the cost of" ...........ಎಕ್ಸ್ಟ್ರಾ............ಕೇಳ್ರೋ ಲ್ರೋ ! ಹಸ್ದೋನ್ಗೆ ಹಾಕೋ ಪ್ರಶ್ನೇನಾ !......" (1) 100 loafs of breadoo at one anna eachoo (2) 20 tons of apples at ಬಿಡ್ಗಾಸು ವಂದಕ್ಕೆ (3) 1000 gallons of ಷರ್ಬತ್......at freeನೋ ಏನೋ......ಅಂತೂ cheapoo (4) 10 tons of ice......at ಬಿಟ್ಟಿ......" ಥಕ್ಕೋ ಯಾರಪ್ಪನ್ ಮನೇ ಗಂಟೊ ? " (5) one pound of ಧಂರೋಟ್ at ಧಮ್ಡಿ a ಧಡಿಯ !......" ಸೋರಿ

ಸುರ್‍ಯೋದಿಲ್ವೇನ್ರೋ ನಾಲ್ಗೆ ? ಉರಿಯೋದಿಲ್ವೇನ್ರೋ ಉದ್ರ ?...... ಇದೊಂದೇ ಅಲ್ಲ! ಸ್ಕೂಲ್ ಫೀಸ್ಗೆ ಗತಿ ಇಲ್ದ ಹುಡುಗರ್ನ **"ಹತ್ಸಾವಿರ್ರೂಪಾಯಿಗಳ್ನ ಬ್ಯಾಂಕಿನಲ್ಲಿ, ನೀನು ಹಾಕಿದ್ರೆ ಶೇಕ್ಡಾ 4ರ ಪ್ರಕಾರ ನಾಲ್ಕು ವರ್ಷ ಮಿೂರಿದ ನಂತರ"?!** ಯಾಕ್ರೋ!? ಬಿಡಿಗಾಸಿಲ್ಲದ ಬಡವರ್ಗೆ......ಈ ಬ್ಯಾಂಕಿನ್ಯೋಚ್ನೇ!? ಹೀಗೆಲ್ಲಾ ಕೇಳಿ ಕಾಡ್ಸೋದು, ಗರೀಬ್ ಹುಡುಗ್ರ ಹೊಟ್ಟೇ ಉರ್ಸೋಕಲ್ವೇನ್ರೋ?......ಇವ್ನೊಬ್ಬ ದುಷ್ಮನ್ನಾಯ್ತೋ?......

ಇನ್ನು Algebraದೋನೋ!? ಅಚಾರಿ! ಮುದ್ರಾರಾಕ್ಷಸ!! alphabet complete ಆಗಿ ಗೊತ್ತಿಲ್ಲ ಅವನಿಗೆ!......A. B. C. ಗೊತ್ತು! x y z ಗೊತ್ತು! ಆಗಾಗ್ಯೆ PQRSಉ! ಯಾವಾಗ್ಲಾದ್ರೂ Lಊ Mಊ Nಊ! ಆದ್ರೂನೂವೇ ಬ್ರಾಕೇಟುಗಳೂ ಅಂದ್ರೆ ಪ್ರಾಣ.....ಆ ಮುದ್ರಾ ರಾಕ್ಷಸನಿಗೇ!......"half moon bracketಊ, square bracketoo, flower bracketಉ" ಇದ್ರುಲ್ಲೋ ಮುಳ್ಗಿ, ನನಗೆ marksoo ಅವ್ನ ಮುದ್ರೆ ಹಾಗೆ "full moon bracketಉ" algebraದಲ್ಲಿ ಬರೋವರ್ರೂಗ boysನ ಸತಾಯಿಸ್ತಿದ್ದ, ಎರಡ್ನೇ ದುಷ್ಮನ್ನೂ! ಇನ್ನಿವರಲ್ದೆ, ಜಾಗರ್ಫಿಯೋನು: ಶಾಸ್ತ್ರಿ! ಘಾತ್ಕ! ನಮ್ಮ ಕೋಲಾರದಲ್ಲಿ ಚಿನ್ನದ ವ್ಯಾಪಾರ!, ನಮ್ಮದ್ದೂರ್ನಲ್ಲಿ ಆಸ್ಪತ್ರೆ ಐಬು!, ನಮ್ಮ್ ಆನೇಕಲ್ನಲ್ಲಿ ಅನಾವೃಷ್ಟಿ!, ಅಂಬೋ ನಮ್ಮ ಮೈಸೂರು ದೇಶದ ವಿಚಿತ್ರ ಚರಿತ್ರೇನ ಹೇಳೋದ್ಬಿಟ್ಟು ಆ ಘಾತ್ಕ, ......Kidder ministerನ carpetಗ್ಳು! ಸಹರಾದ ಸಸ್ಯಾದಿಗ್ಳು!......swiss ಸಾಗರದ ಮೇರೆಗ್ಳು! ಅಂತ ತಾನ್ಸುಟ್ಟೆ ಬೆಳ್ದ ಮೈಸೂರ್ನೇ ಮರ್ತ್ಬಿಟ್ಟು, ಹೊರದೇಶ್ದ ವರ್ತಮಾನಾನೆಲ್ಲ ಹುಡುಗರ ತಲೇಗೆ ಹತ್ತಿಸ್ತಿದ್ದ ಈ Geography ಶಾಸ್ತ್ರಿ ಒಬ್ಬ!,......

ಮೂರ್ನೇ ದುಷ್ಮನ್ನು! ಅಯ್ತೇ!? ಇನ್ನು History ಯೋನು! ಮನುಷ್ಯ..........ಬ್ರಾಹ್ಮಣ! ಅದ್ರಲ್ಲೂವೆ ಅವನ್ಕೇಳೋ ಪ್ರಶ್ನೆ: "ನೈಸಾಮುಲ್‌ಮುಲ್ಕ್ ಯಾವಾಗ ಸತ್ತ"? ಸತ್ತೋದ ಯಾವ್ದೋ ಶತಮಾನದಲ್ಲಿ!......ಇವ್ನಿಗ್ಯಾಕೋ? ತಿಥಿ ಮಾಡೋಕೇ?.......... "ಭರತವರ್ಷಾತೆಯನ್ನು ಆಗೆದು ನುಂಗಲು ಬಂದ ಆಲೆಕ್ಸಾಂಡರಿನ ಅಶ್ವದ ಹೆಸರೇನು?" ಅಲ್ದೆ, "ಸ್ವೀಡನ್ ರಾಜನ ರಾಯಭಾರಿಯ ಮಗನನ್ನು ಕಚ್ಚಿದ ವಿಷದಿಂದ ಸತ್ತ ನಾಯಿಪಿಳ್ಳೆ ಹೆಸ್ರೇನು?"; ಹೀಗೆಲ್ಲಾ ಹುಡುಗ್ರ ಹೊಟ್ಟೇಗೆ ಕಿಚ್ಚ್ಹಾಕ್ತಿದ್ದ History Teacherರೊಬ್ಬ, ನಾಲ್ಕನೇ ಬಾಲ ವೈರಿ!.....ಇನ್ನಿವರಲ್ದೆ ಸಂಸ್ಕೃತದ Teacherಉ!..........ಶಾಸ್ತ್ರಿಗ್ಳು!..........."ನಮಾಮಿ—ನಮಾವಃ—ನಮಾಮಃ" ಅನ್ಬೇಕಂತೆ; ಆದ್ರೆ, "ಕರಾಮಿ—ಕರಾವಃ—ಕರಾಮಃ" ಅನ್ಬಾರ್ದಂತೆ!! ಯಾಕೋ? ಇಷ್ಟಕ್ಕೂ ನಮ್=ನಮಿಸು;! ಕರ್=ಮಾಡು!! ಬೇಡದ್ದಕ್ಕೆ English ಟೀಚರ್ರು!! ಸಿ. ಯು. ಟಿ. cut ಅಂತೆ;—ಎಚ್. ಯು. ಟಿ. hut ಅಂತೆ;— ಆರ್. ಯು. ಟಿ. rut ಅಂತೆ;—ಪಿ.ಯು.ಟಿ. ಮಟ್ಟಿಗೂ putಅಂತೆ!! ಯಾಕ್ರೋ......ಇದೂ?! ಹಿಡ್ಸುತ್ತೋ ಇಲ್ವೋ ಹುಚ್ಚು, ಹುಡುಗ್ರಿಗೇ? ಹೇಳ್ರೋ! ಹೀಗೊಬ್ಬೊಬ್ಬಾಲವೈರೀನೂ petrol ಹಾಕ್ತಾ ಹಾಕ್ತಾ ಉಕ್ತಿತ್ತು ನನ್ ಖೂನು! ಅರ್ಥಮಿಟಿಕ್ನೋನ ಪೌಂಡುಗ್ಳು — ಶೇಕ್ಡಾಗ್ಳು, algebraದೋನ ಹೂವು ಬ್ರಾಕೀಟುಗ್ಳು, ಜಾಗರ್ಫಿಯೋನ land surrounded by wateroo, historyಯೋನ causes of warsoo, Sanskritನೌನ ಸಾವಿರ exceptions to Bhandarkar's one ruleoo, ಇನ್ ಇಂಗ್ಲೀಷ್‌ನೌನ charmingoo, chemistry, chamoisಗ್ಳೂ,—ಇಷ್ಟರ ಪೈಕಿ ಈ ಇಂಗ್ಲಿಷ್ ಟೀಚರೊಬ್ಬ—ಸಾಧು ಪ್ರಾಣಿ—ಮನೆ ತುಂಬ ಮಕ್ಳು—ಇಪ್ಪತ್ತೈದು

ರೂಪಾಯಿ ಸಂಬ್ಳ—ಆ ಇಣ್ಸ್ಪೆಕ್ಟರ್ ಪ್ರಾಣೀಗೆ ಇವನೂಂದ್ರೆ ಬೆಂಕಿ ಯಂತೆ....ಯಾಕೋ ಕಾಣೆ....

ಈ ಹಿಂಸೆಗಳ್ನ ತಪ್ಪಿಸ್ಕೊಳ್ಳೋಕೆ..... ಪಂಜರದಲ್ಲಿ ಸಿಕ್ಕೊಂಡ ಪಾರಿವಾಳಕ್ಕೆ ಒಂದ್ ಚಾನ್ಸ್ ಸಿಕ್ಕೀತೇ ಅಂತ ಕಾದಿದ್ದೆ ! ಸಿಕ್ತು ! Inspectoroo ಬಂದ!......ಬಂದೋನು ಕಾರಿನಿಂದಲೇ ಇವನ್ನೋಡಿ ರೇಗ್‌ಕೊಂಡೇ ಇಳ್ದ......ಅವನೇನ್ಮಾಡಾನ್ ಪಾಪ!...........ಅವನ್ನ ದೊಡ್ಡಮನುಷ್ಯತನದ್ ಘೋರ್ಣೆ!......ಧಿರ್‌ರ್......ಅಂತ......ಘಿರ್ಕಾ ಯಿಸ್ತಿದೆ ದಿವಾಕ್ನ !......ತಗಲ್ಕೊಂಡ ಟೀಚರ್ನ......ಕ್ಲಾಸಿಗ್ ಬರು ತ್ಲಾವೆ!......ಈ ಸಾಧು......ಬೆದರಿಕೊಂಡು......ಅರ್ಧಂಬರ್ಧ ಬಾಯಿ ಬಿಡುತ್ಲಾವೆ, **"ನಿನ್‌ಗೇ ಇಂಗ್ಲೀಷ್ ಗೊತ್ತಿಲ್ಲ......ಟೀಚರ್ ಕೆಲ ಸಕ್ಕೆ ನೀನ್ ಲಾಯಕ್ಕಿಲ್ಲ......ಆದ್ರೂ ನೋಡೋಣ ನಿನ್ನ ಹುಡು ಗರಿಗೆ ಕಲಿಸಿರೋ ಇಂಗ್ಲೀಷ್ನ"** ಅಂತ ಬರ್ದ ಬೋರ್ಡುಮೇಲೆ ಚಾಕ್ನಲ್ಲಿ......ಕೊಶ್ಚನ್ನು.. ......ಕಾಂಪೊzಿಷ್ಣ ಕೊಶ್ಚನ್ನು !! ಅವನ್ನ ಸುಲೋಚ್ನಾನ್ನೋ......ಅವನ್ನರಾಯಿ ಬೂಟ್ನೋ.....ನೋಡುತ್ಲಾವೆ- ಅವನ್ಹಾಗೆ ದೊಡ್ಮನುಷ್ಯನಾಗಿ ಮೆರ್ಯೋ ನಮ್ ಮನೆತನದ ಮಾರಿ!, ನಮ್ಮಣ್ಣನ್ನ ಜ್ಞಾಪ್ಸಿ...........ನನ್ನ ಮುಯ್ಯಿ ತೀರಿಸ್ಕೊ ಳ್ಳೋಕೆ ಮೋಕ್ಕಾನೂ ತೋರಿಸ್ದ by his composition questionoo !...........

**ಸ್ನೇಹಿತರುಗಳೆಲ್ಲರೂ** — ಅದೇನ್ composition ಕಿಟ್ಟೀ? ......ಹೇಳು ಕಥೇನ.

**ಕಿಟ್ಟಿ** — "Write a compositionoo"ಂತ್ಲೋ ಏನೋ ಮೊದ್ಲು ಹಾಕ್ಕೊಂಡ ತಸ್ಕರ! ಅಚಾರೀ! "The dog is a noble animaloo and man who loves dogoo is a noble manoo!" ಅದು (A)! ; ಇನ್ನು (B), "Give

example, ನಿಮ್ಮ lifeನಿಂದಾಂತ" ; ನಾನೋ, composition class ಬರುತ್ಲೂನೂ ಕಿಟಕಿ ಧುಮ್ಕಿ ಓಡೋನು !! .........ಒಂದನ್ಕೂಲ ಕಾಣ್ರೋ ಹೈಸ್ಕೂಲ್ನಲ್ಲಿ ! low ಸ್ಕೂಲ್ನಲ್ಲಿ ಚೆನ್ನಾಗಿ ಓದಿ promotion ಸಂಪಾದ್ಸಿದ್ರೆ—low classesನ ಕಿಟ್ಕಿಗಳ್ಗೆ ಕಂಬಿಗ್ಳು, ಹೈಸ್ಕೂಲ್ ಕ್ಲಾಸ್ ಕಿಟ್ಕಿಗಳ್ಗೆ ಇರೋದಿಲ್ಲ—attendance ಆಗತ್ಲೂನೂವೆ ಆzಾದಾಗಿ ಧುಮುಕ್ಬಹುದ್ದು foot ball fieldಗೆ!!! ಆದ್ರೆ, ಇವತ್ತೀನೋ ನಮ್ಮ್ ಸಾಧು ಟೀಚರ್ನ ತಾತ್ಸಾರ ಮಾಡಿದ, ನಮ್ಮಣ್ಣನ್ನ ಜ್ಞಾಪಿಸ್ದ, ಈ ದೊಡ್ಮನುಷ್ಯ ಇಓ ಸ್ಪೆಕ್ಟರ್ಗೆ ತೋರ್ಸ್ಬೇಕು ಬಿಡ್ಬೇಕು ನನ್ನ ಇಂಗ್ಲೀಷ್ನ ಅಂತ ನಾಟ್ಕೊಂಡು ಹಿಡ್ದೆ ನನ್ನ ಮನಸ್ಸಿನಲ್ಲಿ ಒಂದ್ಹಟ! ಬರೆದೇ ನೋಡು ಭೂಪ್ತಿ......ಒಂದು compositionoo...........

**ಅಪ್ಪೂ** — (With eyes gleaming) ಹೇಳು ಕಿಟ್ಟೀ ! ......subjectಉ ? "The dog is a noble animal"ಏ? ಏನ್ಬರ್ದೆ ?

**ಕಿಟ್ಟಿ** — Subject ಇಲ್ಲೋರೀ !' objectಊ......ಉರಿ...... ಸೇಡು............ಮುಯ್ಯಿ...........ಸ್ಕೂಲಿನ್ಮೇಲಿದ್ದ ಸೇಡ್ನೂ masters ಮೇಲಿದ್ದ ಮುಯ್ನೂ ನಮ್ಮಣ್ಣನ್ಮೇಲಿದ್ದ ಅಂಗಾರ್ನೂ ಭುಜಾಯಿಸ್ಕೊಳ್ಳೋಕೆ chanceಉ,......objectಉ !! predicateಉ, verboo ! "A verb is a word that declares somethingoo"! ಡಿಕ್ಲೇರ್ ಮಾಡ್ದೇ ನೋಡು ನನ್ನ compositionನಲ್ಲಿ; ನನ್ನ ದಿಲ್‌ನಲ್ಲಿ ಜಲಾಯಿಸ್ತಿದ್ದ ಬೆಂಕೀನ ಇಸ್ತೇಮಾಲ್ಗೆ ತಂದೇ ನೋಡು ಈ ನಾಯಿ ಸಬ್ಜೆಕ್ಟ್ನ......ಕೇಳ್ರೋ ಲ್ರೋ ! ಕೇಕ್ಡಿಕೇಸ್ ! ಈ ನಾಯಿ subjectನ್ನಿಟ್ಕೊಂಡು...... ನನ್ನ object ತೀರಿಸ್ಕೊಳ್ಳೋಕೆ ಬರೆದದ್ನ ! ಕೇಳ್ರೋ, ಲ್ರೋ ನನ್ನ high schoolನಿಂದ ಹಚ್ ಮಾಡ್ಸಿದ compositionನ !!

ರಾಘು — (Chastened by his witnessing that night, of a great Prince's humble but dignified solicitude for his helpless subjects...... a crippled boy's rush into fire and a 'ಪೋಲೀ's blindness to fume and flame in succouring a brother scout—turning his eyes full of true affection towards Kitti) ಹೌದು ಕಿಟ್ಟೀ! ನಿನ್ನ composition ಹೇಳು......ಚಾಚೂ ಬಿಡ್ದೆ......ವಪ್ಪ್ಸ್ ಬರೆದಿದ್ದ್ನ ......ನೋಡೋಣ ನಿನ್ನ memoryನ!

ಕಿಟ್ಟಿ — (Drawing Raghu's arm into his own) ಕೇಳ್ತುಂಜಾ!......ಕೇಳ್ರೋ, ಲ್ರೋ! ನಾನು ಸ್ಕೂಲ್ನಿಂದ ತಪ್ಪಿಸ್ಕೊಂಡ compositionನ ಕೇಳ್ರೋ, ಲ್ರೋ............ನಾನು ಸ್ಕೂಲ್ನಿಂದ ಬರ್ತ್‌ಫರ್ಗಿ ಫರ್ತ್‌ಫರ್ ಬಂದ ಪುರಾಣಾನ! (ಚಿನ್ಮ್ರ ದ್ರೆಯನ್ನು ಧರಿಸಿಕೊಂಡು) ಶುನಕಾದಿ ಮಹರ್ಷಿಗಳೇ! ಕೇಳ್ರೋ compositionನ, ಶೌನಕಾದಿ ಮಹರ್ಷಿಗಳ್ರಾ!

ಕೊಶ್ಚನ್ A: DOG IS NOBLE ANIMAL
MAN WHO LOVES DOG IS NOBLEMAN

ANSWER

(a) Dog = 2 ÷ s

1st ÷ dog = Country (ಕಂಟ್ರಿ)

2nd ÷ dog = Caste (ಜಾತಿ)

1st ÷ dog's house = Street

∵ Country dog's food = ಯೆಂಜ್ಲು

but ಯೆಂಜ್ಲು is in ತಿಪ್ಪೆ ಗುಂಡಿs

∴ 1st ÷ ಕಂತ್ರಿ dog's house is street

Q.E.D.

2nd ÷ dog is ಜಾತಿ

2nd ÷ dog's house is bungalay

∴ Bungalay walas are afraid of robbers ;

again ∵ Bungalaywalas are ದೊಡ್ಮನುಷ್ಯಜಾರ್ತೀ !

∴ Keep money and jewels ಎಕ್ಸ್ಟ್ರಾ !

But 2nd ÷ dogs also want food.

∴ money having ದೊಡ್ಮನುಷ್ಯಾs give food for 2nd ÷ dogs with flesh to make strong to bite 1st ÷ dogs, robbers and ಬಡ ಮನುಷ್ಯಾs.

But flesh market's master is ಕಸಾಬಾ ;

(ಕ=ಕಟುಕ, ಸಾಬಾ=ಸಾಬಿ=mussalman-Gandhi-brother

∴ ಕಟುಕ = ಕಸಾಬಾ = Gandhi brother)

∴ wantedಏ wantedಊ, food for 2nd ÷ dogs for strong teeths.

(*b*) Egsample from life!

1 day I walk up road of Big-wigs pet (ದೊಡ್ಡಮನುಷ್ಯರ ಪೇಟೆ) full of Bungalows = ಬಂಗಲೆಗಳು.

1 bungalow with name 'ಸುಖನಿವಾಸ' on gate door pillar = joyful living place. This out side bungalow.

∵ inside all bungalows quarrels etc.

∵ ದೊಡ್ಡಮನುಷ್ಯರ್ಸ್ get much pay ಎಕ್ಸ್‌ಟ್ರಾ and buy many foods and grow fat.

Their quarrels is all empty fat = ಬರೀ ಕೊಬ್ಬು. Bungalay-walas being all fat, (∵ no muscle) always afraid of outside people, ∴ keep dogs.

When I was before ಸುಖನಿವಾಸ್ ಬಂಗ್ಲೊ, a big black dog came and made noise.

Dog's noise = bark = ಬೊಗಳು.

This dog which is noble animal, jumped on my legs and became hungry, took away one quarter ಸೇರು from my leg.

4 ಪಾವ್s = 1 ಸೇರು.

∴ 1 quarter ಸೇರ್ = 1 ಪಾವು Ans.

*

∴ To stop giving more meals to dog, I took a heavy stone in hand, 1 ಪಂಚೇರ್ weight.

5 ಸೇರ್ಸ್ = 1 ಪಂಚೇರು Ans.

I pressed ಪಂಚೇರ್ stone on noble animal's head strongly. Noble animal stopped meals with my leg and made crying noise = ಗೋಳು. Hearing noble animal's crying noise the ದೊಡ್ಮನುಷ್ಯ of the bungalow came out and sent ಜವಾನ್ = working man, in car for doctor.

∴ ದೊಡ್ಮನ್ಷ also noble man.

Doctor came and ದೊಡ್ಮನ್ಷ said "See boy's leg" !. Doctor saw. ದೊಡ್ಮನ್ಷ asked "Has boy got any disease ?" ∵ dog noble animal, price is 200 rupees. Please also see if dog's teeths broken, ∵ "that boy's leg very strong."

∴ *This is egsample from life for*
*Dog is noble animal.*

ಅಂತಾ ತೀಡ್ತಾ ತೀಡ್ತಾ ಇಧೇನೆ! ಪೆನ್ನೂ......ಪೇಪರ್ರೂ......!......ನಮ್ಮ teacherಗೋ ಖುಷಿ–'ಯಾವತ್ತೂ ತಪ್ಪಿಸ್ಕೊಳ್ಳೋನು, ಈವತ್ತು ಖುದ್ದಾಗಿ ಕೂತ್ಕೊಂಡು, ದಸ್ತಿನ್ಮೇಲ್ ದಸ್ತು extra paper ಮೇಲೆ ink ಸುರಿದು ಸಾ ರಿ ಸ್ತಿ ಧೇ ನೇ'ಂತ; ನಾನ್ಮಗ್ನೋ ಅಷ್ಟೊಟ್ಟಕ್ಕೆ ಮಿಕ್ಕೋರ paperಗಳ್ನೆಲ್ಲಾ correct ಮಾಡಿ,

ಕಾದಿದ್ದ Inspectorಉ; ಕೇಳ್ರೋ !......ಎರ್ಡುರ್ ಕೈಯಿಂದ್ಲೂ ......because of ವzzanಊ, ನನ್ನಾಕ್ವ್ಯಾನ ಎತ್ಕೊಂಡ್ಹೋಗಿ, desk ಮೇಲಿಟ್ಟಿದ್ದು ವಂದ್ ಜ್ಞಾಪ್ಕ; ಸುಲೋಚ್ನ ಸಿಕ್ಕಿ ಸ್ಕೊಂಡು ಹಾಳೆ ಮೇಲೆ ಹಾಳ್ಯಾಗಿ ತಿರುವ್ತಾ !, ಪ್ರಾಣಿ, ಮೂತೀಲಿ ತೋರಸ್ತಾ......'ಹಾವಭಾವಗ್ಳೂಂ'ತಾರಲ್ಲ ಅವುಗಳ್ನ ಆಗಾಗ್ಯೆ ಹೆಡೆ ಎತ್ತಿ ತೋರಸ್ತಾ, ಅವುಗ್ಳ ಯಾತ್ನೇನ ನೋಡಿ, ನನ್ನ objectಉ ವ್ಯರ್ಥವಲ್ಲಾಂತ ಆನಂದದಿಂದ್ನಾನು ಉಬ್ಬಿದ್ದೊಂದ್ ಜ್ಞಾಪ್ಕ, ಕೊನೇಗೆ ನನ್ನ composition ಓದಿದ್ದೀ, ನಮ್ಮಣ್ಣನ್ಜಾತೀಗೆ ಸೇರಿದ ಜಾನ್‌ವಾರು, ಕಂಭದಿಂದಿಳಿದ ನರಹರಿ ಹಾಗೆ—ಕನ್ನಡ ಪೊಯೆಟ್ರೀಲಿ ಬರುತ್ತಲ್ಲಾ—"ದಂತಾವಳಿಯು ಕಟಕಟನೆ,ಕಡಿಯುತ ಕನಲಿ"—ಬಲಗೈಚಾಚ್ತಾ ಬೀದಿ ಬಾಗಲ್ಕಡೆ......judgmentoo ! ....ತುಟಿ ಅದರ್ತಾರ್ ಉಸಿರ್ದರ್ ! "Get out at once ! Don't show your face again !!" ಮೊಖ ಏನು ?, recurring decimalsoo ಅಂತ ತಿಳ್ಕೊಂಡ್ನೇನೋ ? ...ನನ್ನ ಇಂಗ್ಲೀಷ್ compositionನ result ಉ, Leave ಊ ! ಸಂಬ್ಳ ಇಲ್ದೆ !!

**ರಾಘು** — Leave ಊ ? without payನೇ ?.... ಇಲ್ಲಾ, ಫರ್ಲೋನೆ ?

**ಕಿಟ್ಟಿ** — ಅಲ್ಲ ಹುಂಜಾ ! **ಲೋಫರ್, loaf+er** ! loaf= ರೊಟ್ಟಿ, plus,er=ಮಾಡೋನು ! equals ರೊಟ್ಟಿಮಾಡೋನು, equals ರೊಟ್ಟಿ ತುಂಬೋನು ! ಆಗಿನಿಂದ ಈಗಿನ್‌ವರೇಗೂ ನಮ್ಮನೇ ನಾಲ್ಕು ಹೊಟ್ಟೆಗ್ಳೂ ತುಂಬ್ತಿರೋದು, ನನ್ನ sixth formನಲ್ಲಿ, ನಮ್ಮಣ್ಣನ್ಮೇಲಿನ್ ಸೇಡು ತೀರಿಸ್ಕೊಳ್ಳೋಕೇಂತ್ಲೂ, ನಮ್ಮ ಸಾಧು ಇಂಗ್ಲಿಷ್ ಟೀಚರಿಗಾದ ಅವಮಾನಾನ avenge ಮಾಡ್ಕೋಬೇಕೊಂತ್ಲೂ, ನಾನ್ ಬರೆದ ನನ್ನ ಇಂಗ್ಲಿಷ್ composition ಪ್ರಭಾವ ! Therefore ನಾನು ಸ್ಕೂಲು ಬಿಟ್ಟದ್ದು

ciroo ಅಲ್ಲ – cumoo ಅಲ್ಲ – stancesoo ಅಲ್ಲ ! ಕೊಬ್ಬು ! fatoo !! ಬರೀ ಕೊಬ್ಬು ! Empty fatoo !! ಬರೀ ಮಸ್ತಿ !!! ಹೈಸ್ಕೂಲಿನಿಂದ **ಹಚ** ಆಗೋಕೆ, welcome ಚಪ್ಪರ !

**ಅಪ್ಪೂ** — ಆದ್ರೇನ್ ಕಿಟ್ಟಿ......S.M.ಗ್ಳು ನಿಮ್ಮಪ್ಪನ್ಹತ್ರ ಯಾತಕ್ಕೋಗಿರೋದು ಗೊತ್ತೇ............ತಿರ್ಗೂ ನಿನ್ನ high schoolಗೆ ಸೇರ್ಸೋಕೇ !

**ಕಿಟ್ಟಿ** — ದಮ್ಮಯ್ಯಾ ! ಸಾಕು ನಿಮ್ಮ ಸ್ಕೂಲುಗ್ಳು !...... "ನಾನಾಯ್ತು ! ...ಇನ್ನಾನಾಯ್ತು !", ಅಂತ ! ರೆಕ್ಕೆ ಹೋದ ಹಕ್ಕಿ ತಿರಿಗಿ ರೆಕ್ಕೆ ಬಂದು ಆಜಾದಾಗಿ ಹಾರ್ತಾ ಬಂದ ಹದ್ದು,...... ಗೃಧ್ರ,......ಗರುಡ !! ಭೂಪ್ತೀ ಈಗತಾನೇ ಬೇಬಾಕೂಫ್ ಹಾಗೇ ನಿಮ್ಮೀ ಹಾಳ್ ಸ್ಕೂಟ್ ಪಂಜರದಲ್ಲಿ ನನಗೆ ನಾನೇ, ದೂಧ್‌ಫೇಡಾ —ಹಲ್ವಾ ಚಪಲಕ್ಕೆ ಸಿಕ್ಕೊಂಡು ವದ್ದಾಡ್ತಿಧೇನೆ !

(ಕೈಗಳನ್ನು ಜೋಡಿಸಿಕೊಂಡು ವ್ಯೋಮವನ್ನು ಈಕ್ಷಿಸುತ್ತಾ)

" ಆಸ್ಸೀರ್ ಐಸಿನಾಆಕ್ಕರೋ ಕಿಸೀಕು ಕುದ್ರ್ ಗಾರ್ !
ಇಕ್ಕುದರ್‌ಗಾರ್ ಮುಕ್ಕು ತೇರಾಹೈ ಹಜಾರ್ರ್ ಬಾರ್ರ್ !"

**ಅಪ್ಪೂ** — ಹಾಗ್ಹೇಳಿ ಏನ್ಪ್ರಯೋಜ್ನ ಕಿಟ್ಟೀ ? ತಿರ್ಗು ಬಂದ್ಬಿಡ್ತೀಯಾ ನಮ್ಮ ಸ್ಕೂಲ್ಗೆ !

**ಕಿಟ್ಟಿ** — ನಾನು ! ತಿರ್ಗೂ ಸ್ಕೂಲು ! ಅಲ್ಲಿ............ಆ ತೀರ್ಥಂಕರರೂ......viz......ಗಿಣೀ ಮೂಗು ಗಳ್ಳಾಚಾರಿ, ಮುದ್ರಾ ರಾಕ್ಷಸ......ಅರ್ಧಗಂಧ ಪಿಶಾಚಿ...... (ಮಂತ್ರದಂತೆ)

Kidderminister for its carpets

Sheffield for its cutlery

Newcastle for its coal export

Northampton for its boots—ಇತಿ—!!

ಇನ್ನು attendanceಉ! lessonsಉ! Home workಊ! ಸಾಕಪ್ಪಾ....ಸತ್ತರೂ ಬೇಡ....

**ಅಪ್ಪೂ** — Chief Scout's order ಎದುರ್ಗೆ ಇಲ್ಲಾಂಬೋದು ಇಲ್ಲ ಕಿಟ್ಟೀ! ಇಲ್ವೇ ಇಲ್ಲ! ಬಂದೇಬಿಡ್ತೀಯು ನಮ್ಮ ಸ್ಕೂಲ್‌ಗೆ.

**ಕಿಟ್ಟಿ** — ಹಾಗ್ಬಂದರ್ತಾರ್ನೇ ಏನೋ?! ಯಥಾ Inspector ಊ! ಯಥಾ Composition Koschanoo! ಯಥಾ ಭೂಷ್ಟೀ answer ಊ! ಯಾವ subject ಇರ್ಲಿ; ನನ್ composition ವಂದೇ ವಂದು; ಯಥಾ furlough; ಮುಂಚಿನ ಹಕ್ಕಿ ಅಲ್ಲಾ, ಗಿಡ್ಗ ನಾನೀಗ—ಯಥಾ ಹುಬ್ಬ್ಗಂಟು .... ತಥಾ ಹಚಾ......ತಿಗೂರ್ ಆzಾದು! ...ಬಿಡ್ರೋ! ನನ್ನ ಕಟ್ಟಾಂ ಕ್ಕೊಳ್ಳೋ ಕಾಲೇಜ್ನ ಕಟ್ಟೋಕೆ ಕಲ್ಲಿನ್ನೂ ಕ್ವೈಗ್ಸಿಕ್ಕಿಲ್ಲ ಕಂಟ್ರಾ ಕ್ಟರಿಗೆ......ಸದ್ಯ ಸುಲೋಚ್ನದ ಪಾತ್ಗೆ......ಬೆಚ್ಚಿದ್ದು ಎದರ್ ನೋಡ್ತಿ ದ್ರಾರೆ.....ನಮ್ಮ ಮನೇಲಿ......ನಾನು ಬೆಂಕೀಲ್ಬಿದ್ದು, ಬದುಕಿ ಬಂದು ಬೂದಿಯೋ ಇಲ್ಲ, ಬಗ್ಗೋಂತ. Therfore, ನಾನ್ ನಮ್ಮನೇ ಕಡೆ at once ಊ!

(ತನ್ನ ಮನೆಯ ಕಡೆ ತಿರುಗಿ ನೋಡಿ, ಥಟ್ಟನೆ)

ಅಯ್ಯಯ್ಯೋ! ಹೀಗೇ ಬರ್ತಾಯಿದೆಯೋ ಸುಲೋಚ್ನಾ ತಿಗೂರ್! ಯಾಕೋ ಕಾಣೆ!

**ಸ್ಕೌಟು ಮಾಸ್ಟರ್** — [ Entering, muttering to himself, absorbed in deep thought ]

ತ್ಸು! ತ್ಸು! ತ್ಸು! ಏನ್ ತಿಳ್ಕೊಂಡ್ರೋ!?

**ಕಿಟ್ಟಿ — ಯಾರ್‍ರು ಸಾರ್!, ತಿಳ್ಕೊಳ್ಳೋದೂ?**

**ಸ್ಟೇಷನ್ ಮಾಸ್ಟರ್ —** ಓ!! ಹೈನೆಸ್ಸು!: ಮಕ್ಕಳ್ನ ಒಳಗೆ ಬಿಟ್ಬಿಟ್ಟು ಧಾಂಡಿಗನ್ಹಾಗೆ ಹೊರಗೆ ನಿಂತಿದ್ದೀಲ್ಲಾ ನಾನು.....?

**ಕಿಟ್ಟಿ — ಏನ್ಸಾರ್ ನೀವೂನೂವೆ?** (ವಾಚು ಕೈಯನ್ನು ಚಾಚಿ ತೋರಿಸುತ್ತಾ) ಈ ಫಿರಾವ್ ಬಾಬತ್ತು ಮೇಲೆ ನಿಗಾನೇ...... ನಿಮ್ಗೇ? ಒಳಗೆ ಗಾನಾ ಬಂದಿದ್ರೋ......ಎಂಟು ಎಂಜಿನ್ ಮಾರ್ಕು ದರ್ಷನ ಮಾಡೋನು ನಾನು!—ನನಗೇ ದಮ್ಮು ಗುಮಾಯಿಸ್ತಿತ್ತು ......ಪತ್ಲ ಬ್‌ಜಿಸ್ಮು ನಿಮ್ದು..... ಅಲ್ಲ.....ನಾಜೋಕು......!

**ಸ್ಟೇಷನ್ ಮಾಸ್ಟರ್ —** ಏನು ಎಂಜಿನ್ ಮಾರ್ಕೋ........... ಧಫನ್ನೂ...........ಎಂಟು ಕಟ್ಟೊ?

**ಕಿಟ್ಟಿ —** (ಚಮಕಿತನಾಗಿ ಮುಖ ಬೆಪ್ಪಾಗಿ ನಾಲ್ಗೆ ತುದಿಯನ್ನು ಕಚ್ಚಿ) ಎಂಜಿನ್ನೂ ಅಂದರೆ......**"ಎಂಜಿನ್ನೂ"** ಸಾರ್...... **"ರೈಲೆಂಜಿನ್"** ಹಾಗೇ......**"ಹೋಗೇಬಿಡೋ"** ಹಾಗೇ......ನೀರು...... ಅಲ್ಲಾ.... **"ನಮ್ಮನೇ ನೀರ್ಮಾನೆ"** ಸಾರ್......"ಎಂಟು ಕಟ್ಟು ಹಸೀ ಸೌದೆ" ಹಾಕಿ......**ಹೊಗೆ**......ನನ್ಗೆ ರಾಬೀತು ಸಾರ್ ರೋಜೀನಾ .....ಆದತ್ತು ಸಾರ್!...........ಅಂಥಾ **ನನ್ಗೇ** ತಕ್ಲೀಫಾಗಿತ್ತೂ!........... ಇನ್ನೂ...... ..ಅಲ್ದೇ...........ಏನ್ಸಾರ್!? ನೀವು ಗಾನಾ ಬಾಕಲ್ನಲ್ಲಿ ನಿಂತ್ಕೊಂಡು ಬೆದ್ರಿಸಿ ಭಗಾಯಿಸ್‌ದಿದ್ದರೇ ಒಳಕ್ನುಗ್ಗೀ...........ನಂ ಪಟಾಲಂ ಪಟಾಲಮ್ಮೇ ಗುಮ್ಮು ಸಾರ್!......ಸ್ಸಾರ್! ನಾಮರ್ದ್ ಗಳೊಂತಿಳ್ಕೊಂಡಿದ್ದೆ ಸಾರ್ ನಮ್ಹುಡುಗರ್ನ...........ಏನ್ನ ಸಾರ್! ಹೊಸಲಲ್ಲಿ ನಿಂತ್ಕೊಂಡು ಲಡ್ನಾಗ್ಳು ಬಟ್ವಾಡೇ ಮಾಡ್ತಿಧೇನೆ!— **ನನ್ನೇ** ದಬಾಯ್ಸೋ ಗೈರತ್ತು ಸಾರ್ ಹುಡುಗರಿಗೆ.....!? **ಒಬ್ಬ Boy Scout ಸಿಕ್ಕೊಂಡಿಧಾನೇಂದ್ರೆ, ಜಾನ್ ಕೊಟ್ಟಾದ್ರೂ ಬಚಾಯಿಸ್ಬೇಕೂಂಬೋ ಗರ್zz ಇಧೆ ಸಾರ್ ಬ್ರಿಗೇಡ್ಗೆ!**

ನೀವೇನ್ನ ಕಮ್ಮೀನೇ ಸಾರ್? ನಾನೂ ಒಂದ್ನಮೂನೆ ನಿಮ್ಮನ್ನ ......ಸತಾಯಿಸಿದ್ದಿದ್ದೇನ್ ಸಾರ್......ಕ್ಷಮಿಸಿಬಿಡಿ ಸಾರ್! **ಒಬ್ರು** ನಿಂತುಕೊಂಡು ಹತ್ತು ಜನಾನ ದಬಾಯ್ಸಿತ್ತಿದ್ರಲ್ಲಾ ಸಾರ್ ನೀವು? ನನ್ಗೇನೇ ನಾಚ್ಕೆ ಆಗ್ತೋಯ್ತು ಸಾರ್!......(ತಲೆಯನ್ನು ತಗ್ಗಿಸಿ...... ಅರ್ಧ ಗದ್ಗದ ಸ್ವರದಿಂದ ತೊದಲುತ್ತ)......ಸಾರ್! ನಾನೇನೋ ಈ ರ್‍ಯಾಲೀ ರುಚೀಲಿ......ಈ Scout ಬಾಬತ್ತಿನಲ್ಲಿ ಕಮ್ಮ್ ನಿಗಾ ಆಗಿದ್ದೆ ಸಾರ್! ಈಗ ಕೈಗೆ ವಾಚೂ ಬಂದ್ಬಿಡ್ತು! ಇದೇನ್ ಫಿರಾವ್ ಬಾಬ್ತೋ ಏನೋ! ಏನಾದ್ರೂ ಆಗ್ಲಿ.....ಇನ್ಮೇಲೆ ಇದ್ನೇ ಆಗಾಗ್ಯೆ ಫಿರಾಯಿಸ್ಕೊಂಡು timeಗೆ ಸರಿಯಾಗಿ ಹಾಜರಾಗೋದು...........good turnooಗ್ಳು ಮಾಡ್ಕೊಂಡು...........good turnooಗ್ಳೊಂದ್ರೆ ಸಾರ್–ಪಾಠ ಹೇಳೋ ಬಾಬತ್ತು ತುಂಡೂ!– ಹೈಸ್ಕೂಲಿಂದ ಹಚ ಆದೋನ್ನಾನು!......ಊರಲ್ಲಿ ಯಾರ ಮನೇ ಗಾದ್ರೂ ನುಗ್ಗಿ ಒಂದಷ್ಟು ಮದ್ದೋ, ಮುಲಾಮೋ ಛಿಕಾರ್‍ಯಿಸ್ಸಿ...... ಗುಡ್ ಟರ್‍ನ್ನುಗ್ಳು......ಬಾಬತ್ನಲ್ಲಿ......ನನ್ನ ಇಜ್ಜತ್ತೂ...... .....ತಮ್ಮ ಇಜ್ಜತ್ತೂ......ನಿಭಾಯಿಸ್ತೇನೆ ಸಾರ್! ಇದು ನನ್ನವಅದ ಸಾರ್! ಬಾಬಯ್ಯಾಣೇಗೂ !!............

[ ಕಣ್ಣುಗಳಲ್ಲಿ ಹನಿಗೂಡುವುದು ]

**ಸ್ಕೌಟು ಮಾಸ್ಟರ್ —** (ಇದನ್ನು ಕೇಳಿ ಅವರ, ಕಣ್ಣುಗಳಲ್ಲಿಯೂ ಹನಿಗೂಡಿ, ನಿಟ್ಟುಸಿರಿಡುವರು: ಆತ್ಮಗತಂ) **What a born scout** !! Join ಮಾಡ್ದಾಗ್ನಿಂದ ಅವ್ನ careerಊ, series of good turnsoo !.....and.....**he does not even know it**! (ನಿಟ್ಟುಸಿರಿಟ್ಟು) **ಇದು,** ideal of a scoutoo !............

[ ಎಂದು ಹೇಳಿಕೊಳ್ಳುತ್ತ ನಿಷ್ಕ್ರಮಿಸುವನು L ]

[ ದಳದವರೆಲ್ಲ ಈ ಸಂಭಾಷಣೆ ಕೇಳಿ ಆವಾಕ್ಕಾಗಿ, ಕಿಟ್ಟಿಯನ್ನೇ ಎವೆಯಿಕ್ಕದೆ ನೋಡಿ ತಲ್ಲೀನರಾಗಿರುವರು ]

**ಕಿಟ್ಟಿ** — (ಎಚ್ಚೆತ್ತು-recovering his usual sang-froid) ಏಳ್ರೊ ಲ್ರೋ! ಗುಗ್ಗುಗಳ್ರಾ! ನಿಮ್ಗೂ ಗೂಡುಗ್ಳಿವೇ ಅಂಬೋದು ಯಾದಿಲ್ಲ್ದ ನಡ್ರಾತ್ರೀಲಿ, ನಡ್ರುಸ್ತೇಲಿ, ನನ್ನ ತಾರೀಫ್ ಮಾಡ್ತಿಧೀರ?! ಏಳೋ! therefore ನಮ್ಮ.......... Scouts of the Nth patrol! 'FALL IN'! (automatically the scouts obey including Raghu) ಹೊರಗ್ಬಾರೋ.... ಜಂಬದ್ಕೋ! ಅಲ್ಲ..........ಹುಂಜಾ! (drags Raghu out and takes his place) ಕೋರಸ್ ಕಿರ್ಲೋ, ರಾಘು, ಮನೆಗ್ಳಿಗೆ march ಮಾಡೋಣ ನೀನು ಲೀಡರು (pulls out his mouth organ) ಗುಬ್ಬಚ್ಚಿ ಹೇಳಿದ್ಹಾಗೆ ನಾನು band master ಆಗ್ತೇನೆ.

[ Starts playing the chorus ]

**ರಾಘು** — ಕಿಟ್ಟಿ, ಲೇ, ಇವತ್ತು ರಾತ್ರೆ ನಿಮ್ಮನೇವುಟ್ಟಿ ಗಾದ್ರೂ ನೀನು ನಮ್ಮ leader ಉ! ಕೋರಸ್ ಕಿರ್ಲು. ನಾವೂ ಕಿರ್ಲ್ತೇವೆ.

[ Pulls Kitti out by his banian and takes his place ]

**ಕಿಟ್ಟಿ** — ಜ್ಞಾಪ್ಕ ಬಂತು!, ನನ್ನ coat ಎಲ್ರೋ?

**ಅಪ್ಪೂ** — ( producing the coat held by Shami, reverently ) ನಾನ್ ಇಟ್ಕೊಂಡಿದ್ದೆ ಕಿಟ್ಟೀ.

**ಕಿಟ್ಟಿ** — ನನಗ್ಗೊತ್ತು ಅಪ್ಪೂ! ನಿಂಗ್ ನಿಗಾಂತ (putting the coat on) hopeless coat ಊ! ಆದ್ರೂ ಜೋಬ್ನಲ್ಲಿ

one ಕಟ್ of ಇಂಜಿನ್ನೂ,......ಅಲ್ಲ ಮಿಷೀನೂ! (puts the mouth organ to his lips) Scouts of the Nth patrol..........The chorus !

(ಎಲ್ಲರೂ ಹಾಡುವರು)

**Sri Rama's strength in duty**
**Sri Krishna's love, devotion**
**Give unto us the pattern**
**Of India's perfection**
**For e'er, for e'er.....**
**In danger, and distress,**
**There is none to be compared**
**With the lads of India's brilliant star**
**With the lads of India's brilliant star**
**With the lads of India's brilliant star**
**With their motto "Be Prepared"**

[ಕಿಟ್ಟು, turns round facing R and starts exitting, marching, playing the mouth-organ; the petrol follows him marching two paces to Kittee's rear, their steps synchopating with the tempo at which Kittee, marching ahead, is playing the Scout Chorus]

[Curtain drops slowly on Empty Stage]

END

---

# ಭರತರಂಗ

## THE GENESIS OF THIS PLAY

### AN EXPLANATORY EPILOGUE

"It is an ill wind that brings no one any good" is an adage that was driven home to me by the following scrap of a local rag which unknowingly helped to solve what has been, these four weeks and more, a mystery that has intrigued two great personages and not a few others of more humble status.

To discuss and decide the practicability of bringing to pass an All-India-Scout-Jamboorее in Bangalore, a conference was held a month ago at the Residency, in which His Highness The Chief Scout, The Hon'ble The Resident, The Chief Scout Commissioners of Mysore and Madras, took part.

As the Officer in command of the Inner Cordon waiting on His Highness The Chief Scout, I* had the privilege of witnessing the proceedings of that function. At the very outset, quite a stir positively unusual on such occasions—pervaded the air, by

the absence at the appointed moment, of the invariably punctual Chief Commissioner of Scouts of Mysore. He arrived no less than fifteen minutes beyond schedule; what chagrin the distinguished company waiting might have felt, faded away in the bizaarre condition, the belated Commissioner of Scouts of Mysore, presented himself in. It was but the dignified self-control of the Royal Scout that smothered the *mise on scene* from culminating in a farcical fiasco:

Trailing a stream of slime and mire as he walked, the Commissioner reached the dias and standing at attention saluted his seniors, gruffly murmuring appologies in unintelligible accents, with turban, tunic and breeches dripping mud and moss, his face, a death mask. The importance of the occasion precluded personalities and the conference proceeded and came to a close with all the decorum characteristic of such functions, and the distinguished assemblage dispersed.

At the end, on the basis of previous acquitance, I purposed to accost the Commi-

ssioner to learn the why and wherefore of the mishap to his proverbial spick and span smartness cap a pie. But the forbidding grimness of his hard countenance, which had ever looked to me as a cross between a gorilla, a tiger and a button-hook, discouraged any advances and I wisely and severely let well alone. With the newspaper cutting given hereunder coming accidently under my eye, the mystery ceased to be one; and I may assure the writer with all my experience of lifelong companionship with the culprit, that no power on earth, in heaven and elsewhere too, can budge him an inch from his thoughts and actions. In explanation there-of, I have given the fore-going history of an entity, who in my eyes, is a phenomenon, a freak, and yet a MAN all the time. In publicising the biography of a man who has all my life exerted a weird influence on me — body, mind, heart, soul, character and career–, I must confess here and now, that nothing short of my status of Police Officer in the Service of His Highness The Maharaja of Mysore protects me from the drastic maltreatment that is invariably meted out to any one that takes liberties

with the name and personality of "Polee Kittee."! With "Jambada Kolee" now a Major and an M. C., serving with the Imperial Forces in Italy, with "Appoo" and "Shamee" both holding Commissions from His Majesty and serving overseas in the Army Medical Corps, it has fallen to the lot of the youngest of the quintette of the earliest cubs in Mysore Scout History, to present for the entertainment and earnest emulation of present-day cubs,—"Gubbatchee" 's History of a Mysore Boy Scout who carried a COMMISSIONER'S BATON in his CUB'S HAVERSACK: Mr. Hassan Krishna Rao, Chief Commissoner of Scouts, Mysore State.

Saklespur RANGANNA, M.A., M.C.S.,
*Dist. Supt. of Police Bangalore.*

---

# ಈ ಪಟಿಂಗನ ಪುಂಡನ್ನು ಅಡಗಿಸುವ ಪ್ರಭುಗಳಿಲ್ಲವೆ ?

ದೇಶಾಭಿಮಾನಿ ಪತ್ರಿಕೆ ಸಂಪಾದಕರಲ್ಲಿ,
ದೇಶಭಕ್ತನ ವಿಜ್ಞಾಪನೆಗಳು :

ಅಯ್ಯಾ,

"ಸತ್ಯಾನ್ನ ಪರೋಧರ್ಮಃ," "ಅಹಿಂಸಾ ಪರಮೋಧರ್ಮಃ" "ಸತ್ಯಮೇವ್ರೋದ್ಧರಾಮ್ಯಹಂ" ಎಂಬ ಬಿರುದಾಂಕಿತರಾದ ನಮ್ಮ ಮಹಾಸ್ವಾಮಿಯವರು ನಮ್ಮನ್ನಾಳುತ್ತಿರುವಲ್ಲಿ, ಮೊನ್ನೆ ಶನಿವಾರ ಪ್ರಭಾತಾನಂತರ ಸುಮಾರು ಹತ್ತು ಹತ್ತೂವರೆ ಗಂಟೆ ಸಮಯದಲ್ಲಿ, ತಾರಾಮಂಡಲ ಪೇಟೆಯ ಮುನಿಯಮ್ಮ ಎಂಬ ಗೃಹಿಣಿಯು ತನ್ನ ಎರಡು ವಯಸ್ಸಿನ ಸೀಮಂತ ಪುತ್ರನನ್ನು ಸಂಪಂಗೀ ಕೆರೆಯ ಕಟ್ಟೆಯ ಮೇಲೆ ಕೂಡಿಸಿ ತನ್ನ ಸೀರೆ ಮತ್ತು ತನ್ನ ಗಂಡನ ಬಟ್ಟೆಗಳನ್ನು ಶುಚಿಮಾಡುತ್ತಿರುವಲ್ಲಿ, ಅರಿವಿಲ್ಲದ ಆ ಶಿಶುವು ಅಂಬೆಗಾಲು ಇಟ್ಟುಕೊಂಡು ಇಳಿಯುತ್ತಿರುವಲ್ಲಿ ಮೆಟ್ಟಲುಗಳ ಚೂಪಾದ ಅಂಚುಗಳು ಜಾನುಗಳಿಗೆ ಘರ್ಷಿಸಿ ಘಾತವಾಗಿ ರಕ್ತೋಸ್ಫಲನವಾಗಿ ಜಾರಿಬಿದ್ದು ಜಲದಲ್ಲಿ ಪತೀತನಾದ ಪುತ್ರನ ಅಸುವನ್ನು ರಕ್ಷಿಸಲೋಸುಗ ತಾನೂ ತಜ್ಜಲದಲ್ಲಿ ಮುಳುಗಿ ಎದ್ದು ಕಿರಲಿದ ಆರ್ತನ ಧ್ವನಿಯು ಸಂಪಂಗೀ ರಸ್ತೆಯ ಮೇಲೆ ಹೋಗುತ್ತಿದ್ದ ಖಾಕೀ ಯೂನಿಫಾರಂ ಟರ್ಬನ್ ಧರಿಸಿ, ಮೋಟಾರ್ ಸೈಕ್ಲಿಸ್ಟ್ ಒಬ್ಬನ ಕಿವಿಗೆ ಬೀಳುತ್ತಲೂ, ಆತನು ಅದೇ ಸೈಕಲ್ಲನ್ನು ತಿರುಗಿಸಿ, ಸಂಪಂಗೀ ಕೆರೆ ಕಟ್ಟೆಯನ್ನು ಸೇರಿ, ಸೈಕಲ್ಲನ್ನು ಒಗೆದು, ಅಂಗಿ ಷರಾಯಿ ಬೂಟ್ಸ್ ಸಮೇತ ನೀರಿನಲ್ಲಿ ಧುಮುಕಿ, ಮುಳುಗುತ್ತಿದ್ದ ಮುನಿಯಮ್ಮನ ಕೇಶವನ್ನು ಒಂದು ಹಸ್ತದಲ್ಲಿ ಹಿಡಿದುಕೊಂಡು, ಮುಳುಗಿ ಎದ್ದ ಮುನಿಯಮ್ಮನ ಶಿಶುವಿನ ಕೇಶವನ್ನು ದಂತಾವಳಿ

ಯಿಂದ ಕಚ್ಚಿಕೊಂಡು, ಉಳಿದೊಂದು ಕೈಯಿಂದ ದಡಕ್ಕೆ ಈಜಿ, ಇಬ್ಬರನ್ನೂ ಫಸ್ಟ್ ಎಯಿಡ್ (First aid) ಕ್ರಮದಿಂದ ಉಪಚಾರ ಮಾಡಿ, ಸಜೀವಿಗಳನ್ನಾಗಿ ಮಾಡಿದ್ದು ಶ್ಲಾಘನೀಯವೇ! ಆದರೂ, ಸರ್ಕಾರೀ ಯೂನಿಫಾರಂ ಹಾಕಿರುವವರ ಕರ್ತವ್ಯ; ಡ್ಯೂಟಿ! ಅವರಿಗೆ ನಾವು ತೆರುವ ತೆರಿಗೆಯ ಋಣ ವಿಮೋಚನಕ್ಕೆ ದ್ವಾರ. ತನ್ನ ಕಾರ್ಯದಿಂದ ತನ್ನ ಋಣವನ್ನು ತೀರಿಸಿಕೊಂಡ ಆತನು ಆ ಕುಟುಂಬ ಸ್ತ್ರೀಯ ನಾಸಿಕವನ್ನು ಎಡಗೈ ಬೆರಳುಗಳಿಂದ ಹಿಡಿದು ಬಲಗೈಯಿಂದ ಅವಳ ಕಪೋಲವನ್ನು ತಾಡಿಸಿ ಹುಯ್ಯ್ ಗಡುಬನ್ನು ಮೀರಿಸುವಂತೆ ಉಬ್ಬಿಸುತ್ತಾ......"ಇನ್ಮೇಲೆ ಹಸು ಮಕ್ಕಳ್ನ ಕೆರೇಗೆ **ತರ್ತೀಯಾ?.... ತರ್ತೀಯಾ?....**

**ತರ್ತೀಯಾ?** ಇನ್ಮೇಲೆ ಕೆರೇಗೆ ಬರೋವಾಗ್ಗೆ ಮಗೂನ ಮನೇಲೇ ಬಿಟ್ಬಿಟ್ಟು **ಬರ್ತೀಯಾ?.... ಬರ್ತೀಯಾ?....**

**ಬರ್ತೀಯ?"** ಎನ್ನುತ್ತಾ ರಾವಣಾಸುರನು ಕೂಡ ಕುಟುಂಬಿನಿಯಾದ ಸೀತಾದೇವಿಗೂ ಮಾಡದ ಅಪಕಾರವನ್ನು ಮಾಡಿ ಪ್ರಾಣಿಯನ್ನು ತಟಾಕದ ಕಟ್ಟೆಗೆ ಬಿಸರಿ, ತೊಯ್ದ uniform ಸಮೇತ ಅದೇ ಕೆರೆಯಲ್ಲಿ ಪುನಃ ಧುಮುಕಿ ಈಜಿ, ಮೋಟಾರ್ ಬೈಸಿಕಲ್ಲನ್ನು ಸೇರಿ, ದಂಡಿನ ಕಡೆಗೆ ದಂಡಯಾತ್ರೆ ಮಾಡಿದ ಈ ಧಾಂಡಿಗನನ್ನು ದಂಡಿಸುವ ದಯಾಳುಗಳು ಈ ದೇಶದಲ್ಲಿಲ್ಲವೇ? (ಘನ ಸರ್ಕಾರದವರು ಇಂತಹ ಆಫೀಸರುಗಳನ್ನು ಶಿಕ್ಷಿಸಿ ಸರಿಯಾದ ದಾರಿಗೆ ತರುವ ಕಾರ್ಯಕ್ರಮವನ್ನು ಕೈಗೊಳ್ಳುವರೇ?)

ಕಂಡು ನೊಂದವ.



296-1943--ಬೆಂಗಳೂರು ಸಿಟಿ ಕೆ. ಪಿ. ಹೆಚ್. ಪ್ರೆಸ್ಸಿನಲ್ಲಿ
ಡಿ. ವಿ. ರಾಮರಾಯರಿಂದ ಮುದ್ರಿತವಾಗಿದೆ.